ಶ್ರೀ ಶೇಷಾಚಲ ಗ್ರಂಥಮಾಲೆ ಆನ

ಶ್ರೀ ಮತ್ಪರಮ

ಶ್ರೀ ವಾಸುದೇವಾನಂದ ಸರಸ್ವತಿ

# ಟೇಂಬೇ ಮಹಾರ

ಗದ್ಯ

## ಚರಿತ್ರವು.

ಸಂಪಾದಕ: — ಭಿ. ಪ. ಕಾಳೆ,

ವ್ಯಾ. ಶ್ರೀ. ಶೇ. ಪ್ರೆಸ್ಸ, ಆನಂದವನ.



1932

ಬೆಲೆ ೩ ಆಣೆ

# ಪ್ರಕಾಶಕರ ಮುನ್ನುಡಿ.



ಈ ಮಹಾನುಭಾವರ ಈ ಚರಿತ್ರವು ಮರಾಠೀ ಭಾಷೆಯಲ್ಲಿ ಶ್ರೀ ಗಾಂಡಾಬುವಾ ಹಾಗು ಮತ್ತೆ ಕೆಲ ಜನರು ಬರೆದ ಗ್ರಂಥಗಳ ಆಧಾರ ದಿಂದಲೂ, ಕೈ. ವಾ. ರಾ. ತ್ರ್ಯ. ಕರ್ಪೂರ ಇವರು ಈ ಮೊದಲು ಸದ್ಬೋಧ ಚಂದ್ರಿಕೆಯಲ್ಲಿ ಬರೆದ ಪುಸ್ತಕದಿಂದಲೂ ಇದನ್ನು ಸಂಪಾದಿಸಿ ಪ್ರಕಟಿಸಿರುತ್ತೇವೆ.



ಮಹಾತ್ಮರ ಈ ಚರಿತ್ರದಲ್ಲಿ ಈ ವರೆಗೆ ಪ್ರಸಿದ್ಧವಾಗದ ಮತ್ತೆ ಕೆಲವು ಲೀಲೆಗಳನ್ನು ಪ್ರಕಟಿಸಬೇಕೆಂದು ನಾವು ಇದು ವರೆಗೆ ಹೆಚ್ಚಾಗಿ ಪ್ರಯತ್ನಿಸಿದೆವು; ಆದರೆ ಅವು ಉಪಲಬ್ಧವಾಗುವದೇ ದುಸ್ತರವಾಯಿತು. ಇನ್ನು ಬಹು ಪ್ರಯಾಸದಿಂದ ಲಬ್ಧವಾದ ಕೆಲವು ಸಂಗತಿಗಳು ಕಾಲ-ಸ್ಥಳ ಹಾಗು ನಾಮ-ನಿರ್ದೇಶಗಳಿಲ್ಲದ ಸಂಗತಿಗಳಾಗಿರುವವು. ಅವುಗಳ ಪ್ರಕಟನದಿಂದ ವಾಚಕರಿಗೆ ವಿಶೇಷ ಪ್ರಯೋಜನವಾಗದೆ, ಅಪಹಾಸ್ಯಕ್ಕೆ ಮಾತ್ರ ಕಾರಣವಾಗಬಹುದೆಂದು ಅನಿಸಿದ್ದರಿಂದ ಅವುಗಳನ್ನು ಬಿಟ್ಟು ಬಿಟ್ಟಿರುತ್ತೇವೆ. ಕನ್ನಡ ವಾಚಕರು ನಮ್ಮ ಗದ್ಯ-ಪದ್ಯ ರೂಪವಾದ ಈ ಚರಿತ್ರಪುಸ್ತಕಿಗೆ ಎಂದಿನಂತೆ ಉದಾರ ಆಶ್ರಯವೀಯುವರೆಂದೂ, ಹೆಚ್ಚಾಗಿ ಪ್ರಯತ್ನಪಟ್ಟು ಇನ್ನು ಮುಂದಿನ ಆವೃತ್ತಿಯಲ್ಲಿ ಈ ಮಹಾತ್ಮರ ಮತ್ತೆ ಕೆಲವು ಲೀಲೆಗಳನ್ನು ಪ್ರಕಟಿಸುವೆವೆಂದೂ ಹೇಳಿ, ಈ ಮುನ್ನುಡಿಯನ್ನು ಮುಗಿಸುವೆವು.

ಪ್ರಕಾಶಕ.

ಶ್ರೀ

# ವಾಸುದೇವಾನಂದ ಸರಸ್ವತಿ ಉರ್ಫ



# ಟೇಂಬೇ ಮಹಾರಾಜರು

| ದೇಹಾವತರಣ | ದೇಹಾವಸಾನ |
| --- | --- |
| ಶಾ. ಶಕೆ ೧೭೭೬ | ಶಾ. ಶಕೆ ೧೮೩೬ |
| ಶ್ರಾವಣ ಶು॥ ೫ | ಜ್ಯೇಷ್ಠ ಶು॥ ೩೦ |

॥ ಶ್ರೀ ಗುರುದೇವ ದತ್ತ ॥



ಶ್ರೀಮತ್ಪರಮಹಂಸ ವಾಸುದೇವಾನಂದ ಸರಸ್ವತೀ

ಉರ್ಫ

# ಶ್ರೀ ಟೇಂಬೇ ಮಹಾರಾಜರವರ ಜೀವನ ಚರಿತ್ರೆ.

## ಪೂರ್ವವೃತ್ತವೂ-ಬಾಲ್ಯವೂ.

ಕೊಲ್ಹಾಪುರದಿಂದ ಪಶ್ಚಿಮಕ್ಕೆ ಸುಮಾರು ಹನ್ನೆರಡು ಮೈಲಿನ ಮೇಲೆ ದಕ್ಷಿಣ ಮಹಾರಾಷ್ಟ್ರದಲ್ಲಿ ಸಹ್ಯಾದ್ರಿ ಪರ್ವತವಿರುತ್ತದೆಂಬದನ್ನು ಬಹು ಜನರು ಬಲ್ಲರು. ಆ ಪರ್ವತದ ಪಶ್ಚಿಮಕ್ಕೆ ಸಾವಂತವಾಡಿಯೆಂಬ ಸಂಸ್ಥಾನವಿರುತ್ತದೆ. ಆ ಸಾವಂತವಾಡಿಯು ಬಳಿಯಲ್ಲಿ ನಿರ್ಮಲಾನದಿಯು ದಂಡೆಯ ಮೇಲೆ "ಮಾಣಗಾವ" ಎಂಬ ಹೆಸರಿನದೊಂದು ಗ್ರಾಮವಿರುತ್ತದೆ. ಮಹಾತ್ಮರಾದ ನಮ್ಮ ಚರಿತ್ರನಾಯಕರು-ಶ್ರೀ ಟೇಂಬೇಮಹಾರಾಜರು-ಇದೇ ಗ್ರಾಮದಲ್ಲಿಯೇ ಅವತರಿಸಿದರು. ಸತ್ಪುರುಷರ ಪ್ರೇಮಕ್ಕೆ ಪಾತ್ರವಾದ ಈ ಗ್ರಾಮದ ಪವಿತ್ರತೆಯನ್ನೆಷ್ಟೆಂದು ಕಲ್ಪಿಸುವದು? ಇಲ್ಲಿ ಯಕ್ಷಿಣೀಯೆಂಬ ದೇವತೆಯು ಇರುತ್ತದೆ. ಈ ಊರಲ್ಲಿ ಮನೆ ಮನೆಗೆ ಸೀನೀರಿನ ಬಾವಿಗಳಿರುವವು. ಮಾರ್ಗಗಳಲ್ಲಿಯೂ, ಮನೆಗಳ ಅಂಗಳಗಳಲ್ಲಿಯೂ ಹಲಸು ಮಾವು ಮೊದಲಾದ ಫಲವೃಕ್ಷಗಳೂ, ತರ

ತರದ ಹೂವಿನ ಗಿಡಗಳೂ ಇರುವವು. ಕೆಲವು ಕಡೆಯಲ್ಲಿ ವನ್ಯವೃಕ್ಷ ಗಳೂ ಕಂಗೊಳಿಸುವವು. ತೆಂಗಿನ ಗಿಡಗಳಿಗಂತೂ ಲೆಕ್ಕವೇ ಇಲ್ಲ! ವೃಕ್ಷಸಮುದಾಯದಿಂದ ಆ ಗ್ರಾಮವು ನಯನಮನೋಹರವಾಗಿ ಒಪ್ಪು ತ್ತದೆ. ಆ ಊರ ಬಳಿಯಲ್ಲಿ ಸಿದ್ಧಪರ್ವತವೆಂಬ ಹೆಸರಿನವೆರಡು ಪರ್ವ ತಗಳಿರುತ್ತವೆ. ಅವುಗಳಲ್ಲಿ ಒಂದು ಊರಿನಿಂದ ಸ್ವಲ್ಪ ದೂರದಲ್ಲಿದ್ದು ಎತ್ತರವಾಗಿರುತ್ತದೆ. ಇನ್ನೊಂದು ಸಾಧಾರಣವಾದ ಗುಡ್ಡವು ಊರ ಬಳಿಯಲ್ಲೇ ಇರುವದು. ಈ ಊರ ಬಳಿಯ ಗುಡ್ಡದಲ್ಲಿ ಒಂದು ಸುಂದರ ವಾದ ಗವಿಯಿರುತ್ತದೆ. ಅದಕ್ಕೆ ಸಿದ್ಧಸ್ಥಾನವೆನ್ನುವರು. ಇದೇ ನಮ್ಮ ಚರಿತ್ರನಾಯಕರ ತಪೋಭೂಮಿಯು.

ಈ ಊರ ಜನಸಂಖ್ಯೆಯು ಸರಾಸರಿ ಆರು ಸಾವಿರವಿರಬಹುದು. ಉತ್ಪನ್ನವು ೧೨೦೦೦ ರೂಪಾಯಿಗಳ ವರೆಗೆ ಇರುವದು. ಇಲ್ಲಿ ಬ್ರಾಹ್ಮ ಣರ ವಸ್ತಿಯು ಹೆಚ್ಚಾಗಿರುವದು. ಇಲ್ಲಿ ವೈದಿಕ ಬ್ರಾಹ್ಮಣರ ಮನೆಗಳೇ ಬಹಳ; ಪ್ರಸ್ತಪ್ರಯೋಜನಗಳಲ್ಲಿ ಇಲ್ಲಿ ೨೦೦ರವರೆಗೆ ಎಲೆಗಳು ಬೀಳು ವವು. ಜನರು ಉಂಡುಟ್ಟು ಸುಖಸಂಪನ್ನರಾಗಿರುವರು. ತಮ್ಮ ತಮ್ಮ ಜಾತಿಯ ಮರ್ಯಾದೆಯನ್ನು ಮೀರಿ ಯಾರೂ ನಡೆಯುವದಿಲ್ಲ. ಈಗಿನ ಸುಧಾರಣೆಯ ಕಾಲದಲ್ಲಾದರೂ ಇಲ್ಲಿಯ ಜನರು ಶೀಲಭ್ರಷ್ಟರಾಗಿಲ್ಲ ವೆಂದು ಹೇಳಬಹುದು. ತಂದೆಯ ಅಪ್ಪಣೆಯಂತೆ ನಡೆಯದ ಮಗನನ್ನೂ, ಪತಿಗೆ ವಿಧೇಯಳಾಗಿ ನಡೆಯದ ಹೆಂಗಸನ್ನೂ ಈ ಊರಲ್ಲಿ ಕಾಣುವದು ಅಪರೂಪವು. ಮನೆಯ ಮುಂದೆ ವೃಂದಾವನವಿಲ್ಲದ, ಹಕ್ಕೆಯಲ್ಲಿ ಆಕ ಳಿಲ್ಲದ ಒಂದು ಮನೆಯಾದರೂ ಇಲ್ಲಿ ಕಣ್ಣಿಗೆ ಬೀಳಲಿಕ್ಕಿಲ್ಲ! ಇಂಥ ಸರ್ವಾಂಗ ಸುಂದರವೂ, ಪವಿತ್ರವೂ, ಆದ ಮಾಣಗಾವದಲ್ಲಿ ಹರಿಭಟ್ಟ ಟೇಂಬೆಯೆಂಬ ಹೆಸರಿನ ಕರ್ಹಾಡೆ ಬ್ರಾಹ್ಮಣರೊಬ್ಬರು ಸರಾಸರಿ ಎಂಬತ್ತು ವರ್ಷಗಳ ಹಿಂದೆ ಆಗಿ ಹೋದರು. ಇವರು ಅತ್ರಿಗೋತ್ರದವರು. ಇವರ ವೈದಿಕವಿದ್ಯಾಪಾಂಡಿತ್ಯವೂ, ಸದಾಚಾರ ಸಂಪನ್ನತೆಯೂ ಇವರ ಘನತೆಯನ್ನು ಚನ್ನಾಗಿ ವ್ಯಕ್ತಗೊಳಿಸುತ್ತಿದ್ದವು. ಹರಿಭಟ್ಟರ ಮನೆತನವು ಬಹುಕಾಲಗಳಿಂದ ಪ್ರಸಿದ್ಧಿಯನ್ನು ಪಡೆದಿದ್ದು, ಹೆಸರುವಾಸಿಗಳಾದ ಹಲವು

ಜನ ವಿದ್ವಾಂಸರು ಈ ಮನೆತನದಲ್ಲಿ ಆಗಿ ಹೋಗಿರುವರು. ಹರಿಭಟ್ಟರು ತಮ್ಮ ಪೂರ್ವಜರ ವರ್ಚಸ್ಸನ್ನು ಬಹು ಜಾಗ್ರತೆಯಿಂದ ಕಾಯ್ದುಕೊಂಡಿದ್ದರು. ಹರಿಭಟ್ಟರು ತೋರಿಕೆಯಲ್ಲಿ ಸೂರ್ಯನಂತೆ ಪ್ರಖರವಾಗಿ ಕಾಣಿಸಿದರೂ, ಅವರು ಅಂತರಂಗದಲ್ಲಿ ದಯಾಪರರೂ ಶಾಂತರೂ ಆಗಿದ್ದರು. ಈ ತೇಜಸ್ವೀ ಪುರುಷರ ಹೊಟ್ಟೆಯಲ್ಲಿ ಮೂವರು ಗಂಡು ಮಕ್ಕಳು ಹುಟ್ಟಿದರು. ಅವರಲ್ಲಿ ಹಿರಿಯರಾದ ಗಣೇಶಭಟ್ಟರೆಂಬವರೇ ನಮ್ಮ ಚರಿತ್ರನಾಯಕರ ಜನಕರು.

ತಂದೆಯಂತೆ ಗಣೇಶಭಟ್ಟರೂ ಒಳ್ಳೇ ವಿದ್ವಾಂಸರಾದರು. "ತಂದೆಯಂತೆ ಮಗನೆ"ಂಬದು ಇಂಥವರಿಂದಲೇ ಸಿದ್ಧವಾಗುವದು. ವಿವೇಕದಲ್ಲಿಯೂ, ಸದಾಚರಣೆಯಲ್ಲಿಯೂ ಗಣೇಶಭಟ್ಟರು ಹಿಂದೆ ಬೀಳಲಿಲ್ಲ. ಯಾಚನಾವೃತ್ತಿಯು ಇವರ ಜೀವನೋಪಾಯಕ್ಕೆ ಮುಖ್ಯ ಸಾಧನವಾಗಿದ್ದರೂ, ಪರಾನ್ನಗ್ರಹಣವು ಗಣೇಶಭಟ್ಟರಿಗೆ ಸರಿಬೀಳುತ್ತಿದ್ದಿಲ್ಲ. ಅವರು ಪರಾನ್ನಗ್ರಹಣ ಪ್ರಸಂಗವನ್ನು ಎಂದೂ ತಂದುಕೊಳ್ಳಲಿಲ್ಲ. ಗಣೇಶಭಟ್ಟರು ಹುಟ್ಟಾ ವಿರಕ್ತಸ್ವಭಾವದವರು. ಅವರು ಪ್ರಾಪಂಚಿಕವಾದ ಯಾವ ಉಪಾಧಿಯನ್ನೂ ಹಚ್ಚಿಕೊಂಡಿದ್ದಿಲ್ಲ; ಆದ್ದರಿಂದ ಸಂಸಾರದ ಭಾರವೆಲ್ಲ ಹರಿಭಟ್ಟರ ಮೇಲೆಯೇ ಬಿದ್ದಿತು. ಗಣೇಶಭಟ್ಟರ ಹೆಂಡತಿಯ ಹೆಸರು ರಮಾಬಾಯಿಯು. ಈ ಪುಣ್ಯಪಾವನಳು ಅನುಸೂಯೆ ಸತಿಯಂತೆ ಮಹಾ ಸಾಧ್ವಿಯಾಗಿದ್ದಳು. ಆಕೆಯು ಲಗ್ನವಾಗಿ ಗಂಡನ ಮನೆಗೆ ಬಂದಂದಿನಿಂದ ಭಕ್ತಿಪೂರ್ವಕವಾಗಿಯೂ ಮನೋವಾಕ್ಕಾಯಗಳಿಂದಲೂ ಪತಿಸೇವೆ ಮಾಡುತ್ತಿದ್ದಳು. ರಮಾಬಾಯಿಯವರ ಈ ಆಚರಣೆಗಳು ಅನುಕರಣೀಯವಾಗಿದ್ದವು. ಅವರು ಏಕಾದಶಿ ಶಿವರಾತ್ರಿಯ ವ್ರತಗಳನ್ನು ತಪ್ಪದೆ ಮಾಡುತ್ತಿದ್ದರು. ಪ್ರತಿನಿತ್ಯ ಶ್ರೀ ಗುರುಚರಿತ್ರಕ್ಕೆ ಅಷ್ಟೋತ್ತರ ಶತಪ್ರದಕ್ಷಿಣ ನಮಸ್ಕಾರಗಳನ್ನು ಹಾಕಿದ ಹೊರತು ಆ ಮಹಾತ್ಮಳು ಊಟ ಮಾಡುತ್ತಿದ್ದಿಲ್ಲ. ಒಟ್ಟಿನ ಮೇಲೆ ಈ ದಂಪತಿಗಳು ಅಲೌಕಿಕ ವ್ಯಕ್ತಿಗಳಾಗಿದ್ದರೆಂದು ಹೇಳಬಹುದು; ಇಲ್ಲವೆ ಭಗವಾನ್ ಅತ್ರಿ ಮಹಾಮುನಿಯೇ ಅನುಸೂಯಾಮಾತೆಯೊಡನೆ ಕಲಿಯುಗದಲ್ಲಿ ಲೋ-

ಕೋದ್ಧಾರಾರ್ಥಕವಾಗಿ ಮಹಾಪುರುಷರ ಉತ್ಪತ್ತಿಗೆ ಕಾರಣವಾಗಿ ದಂಪತಿಗಳ ರೂಪದಿಂದ ಅವತರಿಸಿದ್ದರೆಂದು ಹೇಳಬಹುದು.

ಹಿರಿಯರು ಇರುವಾಗಲೇ ಗಣೇಶಭಟ್ಟರಿಗೆ ಸಂಸಾರವು ಬೇಸರವಾಯಿತು. ಆಗ ಅವರು ಶ್ರೀ ಗಾಣಗಾಪುರ ಕ್ಷೇತ್ರಕ್ಕೆ ಹೋಗಿ, ಶ್ರೀ ದತ್ತಗುರುವಿನ ಉಪಾಸನೆಯನ್ನು ನಡೆಸಿದರು. ಹೀಗೆ ಕೆಲವು ದಿವಸಗಳವರೆಗೆ ಅನುಷ್ಠಾನವು ನಡೆದಿರಲು, ಗಣೇಶಭಟ್ಟರಿಗೆ ವೈರಾಗ್ಯವು ಹೆಚ್ಚಿ, ಅವರು ಸಂನ್ಯಾಸಾಶ್ರಮವನ್ನು ಸ್ವೀಕರಿಸಬೇಕೆಂದು ಯೋಚಿಸಹತ್ತಿದರು; ಆದರೆ ಒಂದು ದಿನ ರಾತ್ರಿ ಭಗವಾನ್ ದತ್ತಗುರುವು ಗಣೇಶಭಟ್ಟರ ಸ್ವಪ್ನದಲ್ಲಿ ಬಂದು:—"ನೀವು ಈಗ ಸಂನ್ಯಾಸಾಶ್ರಮವನ್ನು ಸ್ವೀಕರಿಸದೆ, ಮನೆಗೆ ಹೋಗಿ ಮೊದಲು ಗೃಹಸ್ಥಾಶ್ರಮವನ್ನು ನೆಟ್ಟಗೆ ಪಾಲಿಸಿರಿ" ಎಂದು ಅಪ್ಪಣೆ ಮಾಡಿದನು. ಆ ಕೂಡಲೆ ಗಣೇಶಭಟ್ಟರು ಗಾಣಗಾಪುರದಿಂದ ಹೊರಟು, ಮಾಣಗಾವಕ್ಕೆ ಬಂದು, ಸಂಸಾರಮಾಡಹತ್ತಿದರು.

ಹೀಗಿರಲು, ಪುಣ್ಯರಾಶಿಗಳಾದ ಈ ದಂಪತಿಗಳ ಅಭ್ಯುದಯ ಕಾಲವು ಸಮೀಪಿಸಿತು. ಈಶಕೃಪೆಯಿಂದ ರಮಾಬಾಯಿಯು ಗರ್ಭವತಿಯಾದಳು. ಗರ್ಭಧಾರಣವಾದ ಬಳಿಕ ರಮಾಬಾಯಿಯ ವೃತ್ತಿಯಲ್ಲಿ ಬಹಳ ಅಂತರವಾಗತೊಡಗಿತು. ಆಕೆಯು ಬರಬರುತ್ತ ಶಾಂತಳೂ, ನಿರಿಚ್ಛಳೂ ಆಗಹತ್ತಿದಳು. ಆಕೆಯು ಒಬ್ಬ ಯೋಗಿಯಂತೆ ಯಾವಾಗಲೂ ಬ್ರಹ್ಮಸ್ವರೂಪದಲ್ಲಿ ಲೀನವಾದ ಹಾಗೆ ತೋರುತ್ತಿತ್ತು. ಸದ್ವಿಕಾರಗಳ ಪ್ರಾದುರ್ಭಾವವು ಆ ಪತಿವ್ರತೆಯ ಅಂತಃಕರಣದಲ್ಲಿ ಆಗದಾಯಿತು. ನಾನು-ನೀನೆಂಬ ಭೇದವು ಆಕೆಯಿಂದ ದೂರವಾಗತೊಡಗಿತು. ಒಂದು ದಿನ ರಮಾಬಾಯಿಯು ಏಕಾಂತದಲ್ಲಿ ಕುಳಿತಾಗ ಗಣೇಶಭಟ್ಟರು ಅಲ್ಲಿಗೆ ಹೋದರು. ಆಗ ಅವರು ಹೆಂಡತಿಯನ್ನು ಕುರಿತು:—ನಿನ್ನ ಬಯಕೆಯು ಏನಿರುವದು? ಎಂದು ಕೇಳಿದರು. ಅದಕ್ಕೆ ರಮಾಬಾಯಿಯು ಮುಗುಳುನಗೆ ನಕ್ಕು ನುಡಿದಳೇನಂದರೆ:—ನಾನು ನಿತ್ಯವೂ, ಶಾಶ್ವತವೂ ಆದ ಪರಬ್ರಹ್ಮವಿದ್ದೇನೆ. ನಾನು ನಿರಿಚ್ಛನು. ಚರಾಚರಾತ್ಮಕವಾದ ಸಂಪೂರ್ಣ ಜಗತ್ತನ್ನೇ ವ್ಯಾಪಿಸಿದ್ದೇನೆ. ದೃಶಾದೃಶ್ಯ ಸರ್ವ

ಪದಾರ್ಥಗಳೆಲ್ಲ ನನ್ನಿಂದಲೇ ಉತ್ಪನ್ನವಾಗಿರುತ್ತವೆ; ಆದರೂ ನಾನು ಅವುಗಳಿಂದ ದೂರವಾಗಿರುತ್ತೇನೆ. ಆದರೆ ಜ್ಞಾನಿಗಳಿಗೆ ಮಾತ್ರ ನಾನು ಅತಿ ಸಮೀಪದಲ್ಲಿರುವೆನು.

ಈ ಮೇರೆಗೆ ಹೆಂಡತಿಯು ನುಡಿಯಲು, ಗಣೇಶಭಟ್ಟರು ಆಶ್ಚರ್ಯ ಪಡುತ್ತ ಆಕೆಯ ಕಡೆಗೆ ದಿಟ್ಟಿಸಿ ನೋಡಹತ್ತಿದರು. ಆಗ ಅವರಿಗೆ ಆ ಸ್ಥಳದಲ್ಲಿ ಹೆಂಡತಿಯು ಕಾಣದೆ, ಕಾಷಾಯವಸ್ತ್ರ ಪರಿಧಾನ ಮಾಡಿದ ಸಿದ್ಧಾಸನಾರೂಢರಾದ ಅತ್ಯಂತ ದೇದಿಪ್ಯಮಾನವಾಗಿ ತೋರುವ ಒಬ್ಬ ಸಂನ್ಯಾಸಿಗಳು ದೃಷ್ಟಿಗೆ ಬಿದ್ದರು. ಆ ತೇಜೋಮೂರ್ತಿಯ ದರ್ಶನದಿಂದ ಗಣೇಶಭಟ್ಟರ ಕಣ್ಣುಗಳು ಸಹಜವಾಗಿ ಮುಚ್ಚಿದವು. ಮುಂದೆ ಕೆಲ ಹೊತ್ತಿನ ಮೇಲೆ ಅವರು ಸಾವಧರಾಗಿ ಕಣ್ಣು ತೆರೆಯಲು, ಪುನಃ ಹೆಂಡ ತಿಯೇ ಕಂಡು ಬಂದಳು. ಆಗ ಅವರಿಗೆ ಹ್ಯಾಗಾಗಿರಬಹುದು? ಗಣೇಶ ಭಟ್ಟರಿಗೆ ಈ ಪ್ರಸಂಗದ ಮರ್ಮವೇ ಹೊಳೆಯಲಿಲ್ಲ. ಅವರು ಭ್ರಾಂತಿ ಬಟ್ಟು ಹೆಂಡತಿಯಾಡಿದ ಮಾತುಗಳನ್ನೇ ಸ್ಮರಿಸುತ್ತ ಆಶ್ಚರ್ಯಮಗ್ನ ರಾದರು. ಹೆಂಡತಿಗೆ ಪಿಶಾಚಿ ಬಾಧೆಯಾಗಿರಬಹುದಲ್ಲವೇ? ಎಂದು ಅವರು ವಿಚಾರಮಾಡಹತ್ತಿದರು. ಅಷ್ಟರಲ್ಲಿ ರಮಾಬಾಯಿಯು ಪೂರ್ವಸ್ಥಿತಿ ಹೊಂದಿ, ಎಚ್ಚತ್ತು, ಗಂಡನನ್ನು ನೋಡಿ ಕೂಡಲೆ ಲಗುಬಗೆಯಿಂದ ಎದ್ದುನಿಂತು, ಅತ್ಯಂತ ವಿನಯದಿಂದ:—ತಾವು ಇಲ್ಲಿಗೆ ಯಾವಾಗ ಬಂದಿರಿ? ಎಂದು ಕೇಳಿದಳು. "ನಾನು ಬಂದದ್ದು ಈಕೆಗೆ ಏನೂ ಗೊತ್ತಿಲ್ಲ. ಇಷ್ಟು ಹೊತ್ತಿನ ವರೆಗೆ ಈಕೆಯ ಮೈಮೇಲೆ ಎಚ್ಚರವೇ ಇಲ್ಲವೆಂಬಂತೆ ತೋರುತ್ತದೆ" ಎಂಬದಾಗಿ ಗಣೇಶಭಟ್ಟರು ತಮ್ಮ ಮನಸ್ಸಿ ನಲ್ಲಿಯೇ ಅಂದುಕೊಂಡರು.

ಆ ದಿನ ಗಣೇಶಭಟ್ಟರಿಗೆ ಚೆನ್ನಾಗಿ ನಿದ್ದೆ ಬರಲಿಲ್ಲ. ಈಶಸ್ತವನ ವನ್ನು ಮಾಡಿ ಅವರು ಸುಮ್ಮನೆ ಹಾಸಿಗೆಯ ಮೇಲೆ ಹಾಗೆಯೇ ಬಿದ್ದು ಕೊಂಡರು. ಬೆಳಗುಮುಂಜಾವಿನಲ್ಲಿ ಅವರಿಗೆ ಸ್ವಲ್ಪ ನಿದ್ದೆಹತ್ತಿತು. ಆಗ ಅವರಿಗೆ ಆಶ್ಚರ್ಯಕರವಾದ ಒಂದು ಸ್ವಪ್ನವು ಬಿದ್ದಿತು. ಆ ಸ್ವಪ್ನ ದಲ್ಲಿ ಒಬ್ಬ ದಿಗಂಬರ ಯತಿಯು ಹೇಳಿದ್ದೇನಂದರೆ:—"ವಿಪ್ರಶ್ರೇಷ್ಠನೇ,

ನೀನು ಪೂರ್ವಜನ್ಮದಲ್ಲಿ ಸತ್ಪುತ್ರನನ್ನು ಪಡೆಯಬೇಕೆಂದು ಭಗವಾನ್ ಶ್ರೀ ವಿಷ್ಣುವನ್ನು ಕುರಿತು ಆರಾಧನೆಯನ್ನು ಮಾಡಿರುತ್ತೀ; ಶ್ರೀ ವಿಷ್ಣುವು ನಿನ್ನ ತಪಶ್ಚರ್ಯಕ್ಕೆ ಪ್ರಸನ್ನನಾಗಿ ತಾನೇ ನಿನ್ನ ಪುತ್ರನಾಗಬೇಕೆಂದು ಈಗ ನಿನ್ನ ಹೆಂಡತಿಯ ಗರ್ಭದಲ್ಲಿ ಪ್ರವೇಶಮಾಡಿರುತ್ತಾನೆ. ನಿನ್ನೆಯ ದಿನ ನಿನಗೂ, ನಿನ್ನ ಪತ್ನಿಗೂ ಆದ ಸಂಭಾಷಣದ ಬಗ್ಗೆ ಮನಸ್ಸಿನಲ್ಲಿ ಏನೂ ವಿಕಲ್ಪ ತಾಳಬೇಡ. ನಿನ್ನ ಹೆಂಡತಿಯ ಗರ್ಭದಲ್ಲಿದ್ದ ಪೂರ್ಣ ಪರ ಬ್ರಹ್ಮವೇ ಆ ಮಾತುಗಳನ್ನು ಆಡಿರುತ್ತದೆ. ನಿನ್ನ ಮಗನು ನಿನ್ನ ಕುಲ ವನ್ನು ಉದ್ಧರಿಸುವನಲ್ಲದೆ, ನಾಮಾಂಕಿತ ಬ್ರಹ್ಮವೇತ್ತನಾಗಿ ಲೋಕದಲ್ಲಿ ಶ್ರೀ ಹರಿಯ ಭಕ್ತಿಮಾರ್ಗವನ್ನು ಬೆಳಿಸುವನು; ಮತ್ತು ಸ್ವತಃ ಚತುರ್ಥಾ ಶ್ರಮವನ್ನು ಪರಿಗ್ರಹಿಸಿ ವೈದಿಕಧರ್ಮದ ಪ್ರಸಾರವನ್ನು ಮಾಡುವನು.''

ಬೆಳಗಾದ ಮೇಲೆ ಗಣೇಶಭಟ್ಟರು ಎಚ್ಚತ್ತು ಕನಸಿನಲ್ಲಿ ಕಂಡ ಅವಧೂತ ಮೂರ್ತಿಯನ್ನು ಸ್ಮರಿಸಿ, ಸ್ವಪ್ನದ ಸಂಗತಿಯನ್ನು ತಿಳಿದು ಬಹಳ ಆನಂದಪಟ್ಟರು. ಅಂದಿನಿಂದ ಗಣೇಶಭಟ್ಟರ ಆತ್ಮಕ್ಕೆ ಪೂರ್ಣ ಶಾಂತಿಯು ದೊರೆತು, ಅವರು ಸದಾನಂದಮಗ್ನರಾದರು. ಹರಿಭಟ್ಟರು ಬಹು ಸಂಭ್ರಮದಿಂದ ಸೊಸೆಗೆ ಸೀಮಂತೋನ್ನಯನಾದಿ ಗರ್ಭಸಂಸ್ಕಾರ ಗಳನ್ನು ಪದ್ಧತಿಯಂತೆ ಮಾಡಿಸಿದರು. ರಮಾಮಾತೆಯವರಿಗೆ ಒಂಭತ್ತು ತಿಂಗಳು ತುಂಬಿ ಹತ್ತನೇ ತಿಂಗಳು ಬಿದ್ದಿತು. ಅವರು ಶಾಲಿವಾಹನ ಶಕೆ ೧೭೭೬ ಶ್ರಾವಣ ಶುದ್ಧ ಪಂಚಮಿ ಶುಭ ದಿವಸದಲ್ಲಿ ೨೬ ಗಳಿಗೆ ಗಳ ಸುಮಾರಕ್ಕೆ ಸುಖರೂಪದಿಂದ ಪ್ರಸೂತರಾಗಿ ಪ್ರಾಚೀನ ಸುಕೃತದಿಂದ ಈಶರಾಂಶಸಂಭೂತನಾದ ಪುತ್ರನನ್ನು ಕಂಡರು. ಮಹಾತ್ಮನಾದ ಈ ಬಾಲಕನ ಜನನಕಾಲದಲ್ಲಿ ವರ್ಷಋತುವು ಇದ್ದರೂ ವಸಂತಕಾಲದಂತೆ ಎಲ್ಲ ಕಡೆಗೂ ಫಲವೃಕ್ಷಗಳೂ, ಸಸ್ಯಾದಿಗಳೂ ಪ್ರಫುಲ್ಲಿತವಾಗಿದ್ದವು. ಭಗವಾನ್ ಸೂರ್ಯನಾರಾಯಣನು ಈ ಅರ್ಭಕನಿಗೆ ತನ್ನ ಪ್ರಖರವಾದ ಕಿರಣಗಳ ತಾಪವಾಗಬಾರದೆಂಬ ಭಾವದಿಂದಲೋ ಏನೋ ಎಂಬಂತೆ ಮಂದಪ್ರಕಾಶನಾಗಿದ್ದನು. ಪಕ್ಷಿಗಣಗಳು ತಮ್ಮ ಮಧುರವಾದ ಕಂಠ ದಿಂದ ಜಯಜಯಕಾರ ಮಾಡುವಂತೆ ಶಬ್ದಮಾಡುತ್ತಿದ್ದವು. ಎಲ್ಲ

ಕಡೆಗೂ ಸಮಾಧಾನ ಪ್ರಾಪ್ತವಾಗಿತ್ತು. ಲೋಕೋದ್ಧಾರಕರಾದ ಮಹಾತ್ಮರ ಅವತಾರ ಕಾಲದಲ್ಲಿ ಸರ್ವತ್ರ ಸುಖವುಂಟಾದದ್ದರಲ್ಲಿ ಆಶ್ಚರ್ಯವೇನು?

ಆ ಶಿಶುವಿಗೆ ಜಾತಕರ್ಮಾದಿ ಸಂಸ್ಕಾರಗಳು ವಿಧಾನಪೂರ್ವಕವಾಗಿ ಮಾಡಲ್ಪಟ್ಟವು. ಪುರಾತನ ಸಾಂಪ್ರದಾಯಗಳ ಒಳ್ಳೇ ಅಭಿಮಾನಿಗಳಾದ ಹರಿಭಟ್ಟರು ಮೊಮ್ಮಗನು ಹುಟಿದ್ದಕ್ಕೆ ಪರಮಾನಂದಬಟ್ಟು, ಹನ್ನೆರಡನೆಯ ದಿವಸದಲ್ಲಿ ಸುಮಂಗಲೆಯರಿಂದ ಆ ಶಿಶುವಿಗೆ '**ವಾಸುದೇವ**'ನೆಂಬ ಹೆಸರನ್ನು ಇಡಿಸಿದರು. ವಾಸುದೇವನ ಹೊರತು ಗಣೇಶಭಟ್ಟರಿಗೆ ಇನ್ನಿಬ್ಬರು ಮಕ್ಕಳು ಹುಟ್ಟಿದರು. ಅವರಲ್ಲಿ ಒಬ್ಬನಿಗೆ ಹರಿಯೆಂತಲೂ ಇನ್ನೊಬ್ಬನಿಗೆ ಸೀತಾರಾಮನೆಂತಲೂ ಹೆಸರು ಇಟ್ಟಿದ್ದರು. ಮಹಾತ್ಮಳಾದ ಅನಸೂಯಾಮಾತೆಯ ಪುಣ್ಯೋದರದಿಂದ ವಿಧಿಹರಿಹರರು ಅವತರಿಸಿದಂತೆ, ನಮ್ಮ ಸಾಧ್ವೀಶಿರೋಮಣಿಯಾದ ರಮಾಮಾತೆಯವರ ಪುಣ್ಯೋದರದಲ್ಲಿ ಮೂವರು ಮಕ್ಕಳು ಹುಟ್ಟಿದ್ದು ಮಹತ್ವದ ಸಂಗತಿಯಾಗಿರುತ್ತದೆಂದು ಹೇಳಬಹುದು.

ವಾಸುದೇವನು ಬಿದಿಗೆಯ ಚಂದ್ರಮನಂತೆ ದೊಡ್ಡವನಾಗುತ್ತ ನಡೆದನು. ಆತನು ಮೂರೇ ತಿಂಗಳಲ್ಲಿ ಹೊಟ್ಟೆಯಿಂದ ಸರಿಗಾಡ ಹತ್ತಿದನು. ಆತನಿಗೆ ಒಂದೇ ವರ್ಷದಲ್ಲಿ ಕಾಲುಗಳು ಬಂದವು. ಆತನ ಹಲವು ಬಗೆಯ ಬಾಲಲೀಲೆಗಳನ್ನು ನೋಡುತ್ತ ರಮಾಬಾಯಿಯವರೂ-ಗಣೇಶಭಟ್ಟರೂ-ಹರಿಭಟ್ಟರೂ ಬಹು ಕೌತುಕಪಡಹತ್ತಿದರು. 'ಮೂರು ವರ್ಷದ ಬುದ್ಧಿಯು ನೂರುವರ್ಷದ ತನಕ' ಎಂಬಂತೆ ವಾಸುದೇವನಿಗೆ ಚಿಕ್ಕಂದಿನಲ್ಲಿಯೇ ವಸ್ತ್ರಾಭರಣಗಳು ಬೇಡಾಗಿದ್ದವು. ದಿಗಂಬರವೃತ್ತಿಯೇ ಅವನಿಗೆ ಹೆಚ್ಚು ಪ್ರಿಯವಾಗಿತ್ತು. ಉಡಾಳತನವು ವಾಸುದೇವನಲ್ಲಿ ಸ್ವಲ್ಪವೂ ಇದ್ದಿಲ್ಲ. ಬಾಲ್ಯದ ಆತನ ಆಟಗಳೆಂದರೆ, ದೇವರ ಪೂಜೆಯನ್ನು ಮಾಡುವದು, ಭಜನೆ ಮಾಡುವದು ಇವೇ ಮೊದಲಾದ ದೈವಿಕ ಕಾರ್ಯಗಳಾಗಿದ್ದವು. ನಮ್ಮ ಚರಿತ್ರನಾಯಕನ ಈ ಹುಟ್ಟುಗುಣಗಳನ್ನು ನೋಡಿ ಈತನು ಮಹಾಪುರುಷನಾಗುವನೆಂದು ಆ ಕಾಲದ ಜನರು ಅಂದುಕೊಳ್ಳುತ್ತಿದ್ದರು.

ಸಂತತಿಯಲ್ಲಿ ತಾಯಿ-ತಂದೆಗಳ ರೂಪಸಾಮ್ಯವು ಕಂಡುಬರುವಂತೆ, ಮನೋಧರ್ಮಗಳಾದರೂ ಕಂಡುಬರುತ್ತವೆ. ತಂದೆ-ತಾಯಿಗಳ ಆಚರಣೆಗಳು ಯಥಾಶಾಸ್ತ್ರವಾಗಿ ಇದ್ದರೆ ಅವರ ಸಂತತಿಯು ಎಂದೂ ಕುಮಾರ್ಗದರ್ಶಕವಾಗಲಾರದು. ಇದಕ್ಕೆ ನಮ್ಮ ಚರಿತ್ರನಾಯಕನ ಸಾಕ್ಷಿಯೊಂದೇ ಸಾಕು. ಹರಿಭಟ್ಟರು ಕರ್ಮಠರಾದ್ದರಿಂದ ವಾಸುದೇವನಲ್ಲಿ ಸದಾಚರಣೆಯ ಬೀಜಗಳು ಸಹಜವಾಗಿ ಬಿತ್ತಲ್ಪಟ್ಟವು. ಅಡ್ಡಮಾರ್ಗದಿಂದ ನಡೆಯುವವರ ಮಕ್ಕಳು ಎಂದೂ ಹಾದಿಗೆ ಹತ್ತಲಾರರು. ಶಿಶುಗಳಲ್ಲಿ ಅನುಕರಣಶಕ್ತಿಯು ವಿಶೇಷವಾಗಿರುವದರಿಂದ, ಮಕ್ಕಳ ಉತ್ಕರ್ಷವನ್ನು ಚಿಂತಿಸುವವರು ತಾವು ಮೊದಲು ಸುಮಾರ್ಗವನ್ನು ಹಿಡಿಯಬೇಕಾಗುವದೆಂಬದನ್ನು ಯಾರೂ ಮರೆಯಲಾಗದು.

ವಾಸುದೇವನಿಗೆ ನಾಲ್ಕು ವರ್ಷಗಳು ತುಂಬಿ ಐದರಲ್ಲಿ ಬಿದ್ದಿತು. ಆತನ ಕುಶಾಗ್ರಬುದ್ಧಿಯಿಂದ ಹರಿಭಟ್ಟರಿಗೆ ಹಿಡಿಸಲಾರದಷ್ಟು ಆನಂದವಾಗುತ್ತಿತ್ತು. ಅವರು ಸ್ವತಃ ವಾಸುದೇವನಿಗೆ ಕಲಿಸಹತ್ತಿದರು. ವಾಸುದೇವನು ಚೆನ್ನಾಗಿ ಮಾತಾಡಹತ್ತಿದ ಕೂಡಲೆ ಹರಿಭಟ್ಟರು ಅವನನ್ನು ಸುಮ್ಮನೆ ಎಂದೂ ಬಿಡಲಿಲ್ಲ. ಅವರು ಅವನನ್ನು ತಮ್ಮ ಹತ್ತರ ಕುಳ್ಳಿರಿಸಿಕೊಂಡು, ವಿದ್ಯಾಭ್ಯಾಸದ ಕಡೆಗೆ ಅವನ ಲಕ್ಷ್ಯವು ತಿರುಗುವಂತೆ ಸುಲಭ ರೀತಿಯಿಂದ ಅವನಿಗೆ ಶ್ಲೋಕ-ಸ್ಮೃತಿಗಳನ್ನು ಹೇಳುತ್ತಿದ್ದರು. ಸದ್ಧೇತುವಿನಿಂದಲೂ, ಪ್ರೇಮದಿಂದಲೂ ನಿರ್ಧಾರಪೂರ್ವಕವಾಗಿಯೂ ಕೊಡಲ್ಪಡುವ ಇಂಥ ಶಿಕ್ಷಣಕ್ಕೇ ನಿಜವಾದ ಶಿಕ್ಷಣವೆನ್ನಬೇಕು. ಇಂಥ ಶಿಕ್ಷಣದ ಲಾಭವು ನಮ್ಮ ವಾಸುದೇವನಿಗೆ ಒದಗಿ, ಅವನ ಭಾವೀ ಉತ್ಕರ್ಷದ ನೆಲಗಟ್ಟು ಭದ್ರವಾದಂತಾಯಿತು.



## ಬ್ರಹ್ಮಚರ್ಯವೂ-ವಿದ್ಯಾಭ್ಯಾಸವೂ.

ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ವಾಸುದೇವನಿಗೆ ಹರಿಭಟ್ಟರ ಶಿಕ್ಷಣದಿಂದ ಉಪಶಿಕ್ಷಾ, ಅಷ್ಟಾಧ್ಯಾಯೀ ಮೊದಲಾದ ಗ್ರಂಥಗಳು ಅಲ್ಪಕಾಲದಲ್ಲಿ ಬಾಯಿಂದ ಅನ್ನಲಿಕ್ಕೆ ಬಂದವು. ಹರಿಭಟ್ಟರು ದಿನಾಲು ಶ್ರೀಮದ್ಭಗವದ್ಗೀತೆಯು ಪಾರಾಯಣ ಮಾಡುತ್ತಿದ್ದದರಿಂದ ಅದನ್ನು ದಿನಾಲು ಕೇಳಿ ಕೇಳಿ ವಾಸುದೇವನಿಗೆ ಅದು ಮುಖೋದ್ಗತವಾಗಿತ್ತು. ಬೆಳಗು ಮುಂಜಾವಿನಲ್ಲಿ ಬೇಗನೆ ಎದ್ದು ಸ್ತೋತ್ರಾದಿಗಳನ್ನು ಅನ್ನುವ ರೂಢಿಯು ಇದ್ದದರಿಂದ ವಾಸುದೇವನಿಗೆ ನಸುಕಿನಲ್ಲಿ ಏಳುವ ಚಟವು ಬಿದ್ದು ಹೋಗಿತ್ತು. ಉಪನಯನದ ಪೂರ್ವದಲ್ಲಿ ಆಗತಕ್ಕ ವಿದ್ಯಾಭ್ಯಾಸವೆಲ್ಲ ಅಜ್ಜನ ಬಳಿಯಲ್ಲಿಯೇ ಆಯಿತು. ವಾಸುದೇವನ ಬುದ್ಧಿಸಾಮರ್ಥ್ಯವನ್ನು ನೋಡಿಯೂ, ಅಧ್ಯಯನದ ವಿಷಯವಾಗಿ ಆವನಲ್ಲಿರುವ ಆಸ್ಥೆಯನ್ನು ಪರೀಕ್ಷಿಸಿಯೂ ಹರಿಭಟ್ಟರಿಗೆ ಹಿಡಿಸಲಾರದಷ್ಟು ಆನಂದವಾಗುತ್ತಿತ್ತು. ಅವರು ವಾಸುದೇವನ ಉಪನಯನವನ್ನು ಬೇಗನೆ ಮಾಡಬೇಕೆಂದು ಯೋಚಿಸಿದರು. ಶಕೆ ೧೭೮೪ರಲ್ಲಿ ಅಂದರೆ ವಾಸುದೇವನ ಎಂಟನೇ ವರ್ಷದ ವಯಸ್ಸಿನಲ್ಲಿ ಉಪನಯನ ಸಮಾರಂಭವು ನೆರವೇರಿಸಲ್ಪಟ್ಟಿತು. ಅಂದಿನಿಂದ ವಾಸುದೇವನ ಬ್ರಹ್ಮಚರ್ಯವ್ರತಕ್ಕೆ ಪ್ರಾರಂಭವಾಯಿತು. ಪವಿತ್ರವಾದ ಮೇಖಲಾ-ಅಜಿನ-ಯಜ್ಞೋಪವೀತಗಳಿಂದ ವಾಸುದೇವನ ಬ್ರಹ್ಮತೇಜಸ್ಸು ಹೆಚ್ಚಿತು. ಸತ್ಕರ್ಮಪ್ರಿಯನಾದ ವಾಸುದೇವನಿಗೆ ಅಜ್ಜನ ಕಠಿಣ ನಿಯಮಗಳಿಂದ ಎಳ್ಳನಿತು ಕಷ್ಟವೆನಿಸಲಿಲ್ಲ. ಅವನು ಮತ್ತಷ್ಟು ಹುರುಪುಗೊಂಡು ಅಜ್ಜನು ಹೇಳಿದ ನಿಯಮಗಳನ್ನೆಲ್ಲ ಪಾಲಿಸಹತ್ತಿದನು. ಸ್ನಾನ ಸಂಧ್ಯಾ-ಪಾರಾಯಣ ವೇದಪಠಣ ಮೊದಲಾದವುಗಳು ವಾಸುದೇವನ ನಿತ್ಯದ ಮುಖ್ಯ ಕೆಲಸಗಳಾಗಿದ್ದವು. ಹರಿಭಟ್ಟರು ಕೈಮುಟ್ಟಿ ಬರೆದ ಶ್ರೀ ಗುರುಚರಿತ್ರವೇ ವಾಸುದೇವನ ಪಾರಾಯಣದ ಪುಸ್ತಕವಾಗಿತ್ತು ಚಿಕ್ಕವಯಸ್ಸಿನಲ್ಲಿ ಶ್ರೀ ಗುರುಚರಿತ್ರದ ಪಾರಾಯಣದಿಂದ ವಾಸುದೇವನಲ್ಲಿ ದೈವಶ್ರದ್ಧೆಯು ಪೂರ್ಣವಾಗಿ ನೆಲೆಗೊಂಡಿತು.

ಹರಿಭಟ್ಟರ ಮನಸ್ಸಿನಲ್ಲಿ ವಾಸುದೇವನಿಗೆ ತಾವೇ ಸಂಪೂರ್ಣವಾಗಿ ವೇದಾಧ್ಯಯನ ಮಾಡಿಸಬೇಕೆಂಬದು ಬಹಳ ದಿವಸಗಳಿಂದ ಇತ್ತು. ಅದರಂತೆ ಉಪನಯನವಾದ ಕೂಡಲೆ ಅವರು ಅವನಿಗೆ ವೇದಾಧ್ಯಯನವನ್ನು ಪ್ರಾರಂಭಿಸಿದರು; ಆದರೆ ಮನುಷ್ಯರ ಮನೋರಥಗಳೆಲ್ಲ ಎಲ್ಲಿ ಪೂರ್ಣವಾಗುತ್ತವೆ? ವಾಸುದೇವನ ಉಪನಯನವಾಗಿ ಎರಡು ವರ್ಷಗಳಾದರೂ ಪೂರ್ಣವಾಗಿದ್ದಿಲ್ಲ. ಅಷ್ಟರಲ್ಲಿ ದುರ್ಧರನಾದ ಕಾಲನು ಹರಿಭಟ್ಟರನ್ನು ಇಹಲೋಕದಿಂದ ಮುಕ್ತರನ್ನಾಗಮಾಡಿದನು. ಹರಿಭಟ್ಟರು ದೇಹವಿಸರ್ಜನೆ ಮಾಡಿದಾಗ ಶಾಲಿವಾಹನ ಶಕೆಯು ೧೭೮೭ನೇದು ನಡೆಯುತ್ತಿತ್ತು. ಅಜ್ಜನ ಮರಣದಿಂದ ನಮ್ಮ ವಾಸುದೇವನಿಗೆ ಪರಮಾವಧಿಯಾಗಿ ವ್ಯಸನವಾಯಿತು; ಆದರೆ ದೈವಸಂಕಲ್ಪಕ್ಕೆ ಯಾರ ಯತ್ನವೇನು? ಹೀಗೆ ಆಕಸ್ಮಿಕವಾಗಿ ಒದಗಿದ ಅಜ್ಜನ ವಿಯೋಗದಿಂದ ನಮ್ಮ ವಾಸುದೇವನ ವಿದ್ಯಾವ್ಯಾಸಂಗಕ್ಕೆ ಬಹು ದೊಡ್ಡ ವಿಘ್ನವು ತಟ್ಟಿತು. ಯಾಕಂದರೆ, ವಾಸುದೇವನ ತಂದೆಯವರಾದ ಗಣೇಶಭಟ್ಟರು ವಿರಕ್ತರಾದ್ದರಿಂದ ಅವರು ವಾಸುದೇವನ ವ್ಯಾಸಂಗದ ಕಡೆಗೆ ಏನೂ ಲಕ್ಷ್ಯಗೊಡುತ್ತಿದ್ದಿಲ್ಲ. ಇಷ್ಟೇ ಅಲ್ಲ; ಹರಿಭಟ್ಟರ ಪಶ್ಚಾತ್ ಸಹ ಅವರು ಸಂಸಾರದ ಯೋಗಕ್ಷೇಮವನ್ನು ತಕ್ಕೊಳ್ಳದಾದ್ದರಿಂದ ವಾಸುದೇವನೇ ಸಂಸಾರೋಪಾಧಿಯಲ್ಲಿ ಸೇರಬೇಕಾಯಿತು. ಆಗ ಅವನಿಗೆ ವಯಸ್ಸಾದರೂ ಬಹಳವಾಗಿದ್ದಿಲ್ಲ. ಹತ್ತುವರ್ಷಗಳು ಅದೇ ತುಂಬಿದ್ದವು. ಮನೆಯಲ್ಲಿ ತಾಯಿಯು ಹೆಣ್ಣುಮಗಳು; ತಮ್ಮಂದಿರು ಸಣ್ಣವರು; ಅಂದಬಳಿಕ ವಾಸುದೇವನು ಈ ಪ್ರಸಂಗದಲ್ಲಿ ತನ್ನ ಅಭ್ಯಾಸಕ್ಕಾಗಿ ಬೇರೆ ಕಡೆಗೆ ಹ್ಯಾಗೆ ಹೊರಟುಹೋದಾನು? ಆ ಸೌಜನ್ಯದ ಬಾಲಕನು ತಾಯಿಯ ಅನುಮತಿಯಂತೆ ಸಂತೆ-ಪೇಟೆಯಲ್ಲಿ ಸಾಮಾನುಗಳನ್ನು ತರಹತ್ತಿದನು. ರಮಾಬಾಯಿಯು ಸಿಟ್ಟಿನ ಸ್ವಭಾವದವಳಾದ್ದರಿಂದ ವಾಸುದೇವನಿಗೆ ಒಮ್ಮೊಮ್ಮೆ ಬಹಳ ತ್ರಾಸವನ್ನು ಸೋಸುವ ಪ್ರಸಂಗವು ಬರುತ್ತಿತ್ತು.

ತಮ್ಮಂದಿರು ಸ್ವಲ್ಪ ದೊಡ್ಡವರಾದ ಬಳಿಕ ನಮ್ಮ ವಾಸುದೇವನ ಸಂಸಾರಶೃಂಖಲೆಯು ಹರಿಯಿತು. ಆಗ ಅವನು ತಾಯಿಯ ಅಪ್ಪಣೆ

ಪಡೆದು ವಿದ್ಯಾಭ್ಯಾಸಕ್ಕಾಗಿ ಬೇರೆ ಕಡೆಗೆ ಹೋಗಲು ಯೋಚಿಸತೊಡಗಿದನು. ಆ ಕಾಲಕ್ಕೆ ಸಾಂಗಲಿಯಲ್ಲಿ 'ತಾತ್ಯಾ ಉಕೀಡವೆ' ಎಂಬುವರೊಬ್ಬರು ವೇದಗಳಲ್ಲಿ ಪಾರಂಗತರೆಂದು ಒಳ್ಳೇ ಪ್ರಸಿದ್ಧಿಯನ್ನು ಪಡೆದಿದ್ದರು ಅವರಿಗೆ ಅಲ್ಲಿಯ ವೇದಪಾಠಶಾಲಾಧ್ಯಾಪಕರ ಕೆಲಸವೂ ಇತ್ತು. ನಮ್ಮ ವಾಸುದೇವನು ಬೇರೆ ಯಾವ ಕಡೆಗೂ ಹಂಬಲಿಸದೆ ನೆಟ್ಟಗೆ ಸಾಂಗಲಿಗೆ ಹೋಗಿ, ತಾತ್ಯಾ ಉಕೀಡವೆಯವರ ಬಳಿಯಲ್ಲಿ ವೇದಾಧ್ಯಯನ ಪ್ರಾರಂಭಿಸಿದನು. ಈತನ ಪಾಠಶಕ್ತಿಯನ್ನು ನೋಡಿ, ತಾತ್ಯಾ ಉಕೀಡವೆಯವರು ಮನಸ್ಸುಗೊಟ್ಟು ಅಭ್ಯಾಸ ಮಾಡಿಸಹತ್ತಿದರು. ಒಂದೇ ವರ್ಷದ ಅವಧಿಯಲ್ಲಿ ಋಕ್ ಸಂಹಿತೆಯೂ, ಬ್ರಾಹ್ಮಣವೂ ಮುಗಿದವು! ವೇದಾಧ್ಯಯನ ಮಾಡುವವರಾರಿಗಾದರೂ ಈ ನಮ್ಮ ವಾಸುದೇವನ ಅಗಾಧವಾದ ಪಾಠಶಕ್ತಿಯ ಬಗ್ಗೆ ಕೌತುಕವುಂಟಾಗದಿರದು.

ಬಳಿಕ ವಾಸುದೇವನು ದಶಗ್ರಂಥಗಳನ್ನು ಸ್ವಬುದ್ಧಿಯಿಂದಲೇ ಪರಿಶ್ರಮ ಮಾಡಿ ಕಲಿತು ಸಂಸ್ಕೃತ ಕಲಿಯಬೇಕೆಂದು ಎಣಿಕೆ ಹಾಕಹತ್ತಿದನು. ಕರ್ಮ-ಧರ್ಮ ಸಂಯೋಗದಿಂದ ಒಬ್ಬ ಪ್ರಸಿದ್ಧ ಶಾಸ್ತ್ರಿಗಳು ಆದರಪೂರ್ವಕವಾಗಿ ಅವನಿಗೆ ಸಂಸ್ಕೃತವನ್ನು ಕಲಿಸತೊಡಗಿದರು. ರಘುವಂಶಕಾವ್ಯದೊಳಗಿನ ೧೫ ಶ್ಲೋಕಗಳು ಮುಗಿಯುತ್ತಲೇ ವಾಸುದೇವನಿಗೆ ಸಂಸ್ಕೃತದಲ್ಲಿ ಚನ್ನಾಗಿ ವ್ಯುತ್ಪತ್ತಿಯಾಯಿತು. ಬೇಕಾದಂಥ ಕಠಿಣ ಶ್ಲೋಕವಿದ್ದರೂ ಅದರ ಅರ್ಥವನ್ನು ಸಮರ್ಪಕವಾಗಿ ಹೇಳುವಷ್ಟು ಶಕ್ತಿಯು ಅವನಲ್ಲಿ ಬಂದಿತು. ಅಪ್ರತಿಮ ಬುದ್ಧಿಶಾಲಿಗಳಿಗೆ ಅಲ್ಪ ಶ್ರಮದಲ್ಲಿ ಅವರ ಇಚ್ಛಿತ ಫಲವು ಕೈಗೂಡುವದು ಆಶ್ಚರ್ಯವಲ್ಲ! ಓದು ಒಕ್ಕಾಲು, ಬುದ್ಧಿ ಮುಕ್ಕಾಲು ಎಂಬ ಕನ್ನಡ ಗಾದೆಯು ಇಂಥವರಿಗೆ ಚನ್ನಾಗಿ ಹತ್ತುತ್ತದೆ. ಹೀಗೆ ಸಂಸ್ಕೃತದಲ್ಲಿ ಜ್ಞಾನವುಂಟಾಗಲು, ವಾಸುದೇವನು ಸುಮ್ಮನೆ ಕೂಡದೆ ವಿದ್ಯಾರ್ಥಿಗಳಿಗೆ ಅಭ್ಯಾಸ ಮಾಡಿಸಹತ್ತಿದನು. ಜನರಿಗೆ ಪುರಾಣ ಪುಣ್ಯಕಥೆಗಳನ್ನು ಹೇಳಹತ್ತಿದನು. ವಿದ್ಯಾವ್ಯಾಸಂಗ ಮಾಡುವ ಕಾಲಕ್ಕೆ ವಾಸುದೇವನು ಸ್ನಾನ-ಸಂಧ್ಯಾ-ಪಾರಾಯಣಾದಿಗಳನ್ನು ಎಂದೂ ಬಿಡಲಿಲ್ಲ. ಇಷ್ಟೇ ಅಲ್ಲ; ಅವನು

ಬ್ರಹ್ಮಚರ್ಯಾಶ್ರಮದ ಎಲ್ಲ ನಿಯಮಗಳನ್ನೂ ಸರಿಯಾಗಿ ಪಾಲಿಸಿದ್ದರಿಂದ, ಅವನಲ್ಲಿ ಪವಿತ್ರತೆಯುಂಟಾಗಿ ವೇದಮಂತ್ರ ಸಿದ್ಧಿಯು ಪ್ರಾಪ್ತವಾಯಿತು. ವೇದಾಧ್ಯಯನ ಮಾಡುವ ಪ್ರತಿಯೊಬ್ಬರು ನಮ್ಮ ಚರಿತ್ರನಾಯಕನಂತೆ ಮಂತ್ರಸಿದ್ಧಿಯನ್ನು ಪಡಕೊಳ್ಳದಿದ್ದರೆ ವೃಥಾಶ್ರಮಕ್ಕೆ ಗುರಿಯಾಗಬೇಕಾಗುವದೆಂಬದನ್ನು ಮರೆಯಲಾಗದು. ಸತ್ಕರ್ಮಾಚರಣೆಯಿಂದ ಕ್ರಿಯಾಸಿದ್ಧನಾಗದ ಮನುಷ್ಯನಿಗೆ ವೇದಮಂತ್ರದ ಸಿದ್ಧಿಯು ಹ್ಯಾಗೆ ಪ್ರಾಪ್ತವಾಗಬೇಕು? ನಮ್ಮ ವಾಸುದೇವನು ಬರಿಯ ವೇದಮಂತ್ರಗಳನ್ನು ಪಾಠಮಾಡಿ ಗಿಳಿಯು ಓದಿನ ಸಾಮ್ಯವನ್ನು ಹೊಂದದೆ, ವೈದಿಕ ಮಂತ್ರಗಳ ನಿಜವಾದ ತೇಜಸ್ಸು ತನ್ನಲ್ಲಿ ಪ್ರಾಪ್ತವಾಗಬೇಕೆಂಬ ನಿರ್ಧಾರದಿಂದ ಬ್ರಹ್ಮಚರ್ಯವನ್ನು ಒಳ್ಳೇ ಕಠಿಣ ನಿಯಮಗಳಿಂದ ನಡಿಸಿ ತೇಜಸ್ಸನ್ನೇ ಪಡೆದನು. ಭೋಜನ ಕಾಲದಲ್ಲಿ ಅಂತ್ಯಜರ, ಇಲ್ಲವೆ ರಜಸ್ವಲೆಯಾದ ಹೆಂಗಸರ ಶಬ್ದಗಳನ್ನು ಅವನು ಎಂದೂ ಕೇಳುತ್ತಿದ್ದಿಲ್ಲ. ಅಕಸ್ಮಾತ್ತಾಗಿ ಅಂಥ ಪ್ರಸಂಗವೊದಗಿದಲ್ಲಿ ಅವನು ನಿರಾಹಾರ ಮಾಡುತ್ತಿದ್ದನು. ಬ್ರಹ್ಮಚರ್ಯದ ಶಾಸ್ತ್ರೋಕ್ತವಾದ ಎಲ್ಲ ನಿಯಮಗಳು ವಾಸುದೇವನ ಆಚರಣೆಯಲ್ಲಿ ಮೂರ್ತಿಮಂತವಾಗಿ ಕಂಡು ಬರುತ್ತಿದ್ದವೆಂಬದನ್ನು ಮೇಲೆಯೇ ಹೇಳಿರುತ್ತದೆ.

ಈ ಮೇರೆಗೆ ವಾಸುದೇವನು ೧೨ ವರ್ಷಗಳ ವರೆಗೆ ಬ್ರಹ್ಮಚರ್ಯವನ್ನು ಪಾಲಿಸಲು ಅವನಲ್ಲಿ ಉಂಟಾದ ವೇದಮಂತ್ರಗಳ ಸಾಮರ್ಥ್ಯವು ಜನರ ನಿದರ್ಶನಕ್ಕೆ ಬರಹತ್ತಿತು. ಒಬ್ಬ ಗೃಹಸ್ಥನ ಮನೆಯಲ್ಲಿ ಒಂದು ಇರುಕಳ ಆಕಳವಿತ್ತು. ಅದು ಮನೆಯಲ್ಲಿ ಯಾರನ್ನೂ ಹತ್ತರ ಬರಗೊಡುತ್ತಿದ್ದಿಲ್ಲ. ಅದನ್ನು ಕಟ್ಟುವ, ಹಾಗು ಬಿಡುವ ಕೆಲಸಗಳು ಆ ಮನೆಯವರಿಗೆ ಬಹಳ ಭಾರವಾಗಿದ್ದವು. ಒಂದು ದಿನ ನಮ್ಮ ಚರಿತ್ರನಾಯಕನು ಸಹಜವಾಗಿ ಅವರ ಮನೆಗೆ ಹೋದಾಗ, ಆ ಆಕಳವು ದೃಷ್ಟಿಗೆ ಬಿದ್ದಿತು. ಆಗ ಅವನು ವೇದಮಂತ್ರ ಪ್ರಭಾವವನ್ನು ಜನರ ನಿದರ್ಶನಕ್ಕೆ ತಂದುಕೊಡಬೇಕೆಂದು ಬಗೆದು, ಆ ಆಕಳದ ಹತ್ತರ ಹೋದನು ಮೊದಮೊದಲು ಅದು ತನ್ನ ಸ್ವಭಾವಕ್ಕನುಸರಿಸಿ ಕಣ್ಣೀಕೀಳಹತ್ತಿ, ವಾಸು

ವೇವನನ್ನು ಇರಿಯಲು ಹವಣಿಸತೊಡಗಿತು; ಆದರೆ ವಾಸುದೇವನು ಪಠಿಸಿದ ವೇದಋುಕ್ಕುಗಳು ಕಿವಿಗೆ ಬೀಳಲು, ಅದು ತನ್ನ ದುಷ್ಟ ಸ್ವಭಾವವನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟಿತು. ವಾಸುದೇವನು ಆ ಆಕಳದ ಬೆನ್ನ ಮೇಲೆ ಚಪ್ಪರಿಸಿ ಅದನ್ನು ಕೃಪಾದೃಷ್ಟಿಯಿಂದ ನೋಡಿ ಹೊರಟು ಹೋದನು. ಈ ಚಮತ್ಕಾರವು ಹಾ ಹಾ ಅನ್ನುವಷ್ಟರಲ್ಲಿ ಪಸರಿಸಿ, ವಾಸುದೇವನ ವಿಷಯವಾಗಿ ಜನರಲ್ಲಿ ಪೂಜ್ಯಬುದ್ಧಿಯನ್ನು ಹುಟ್ಟಿಸಿತು. ನಿಸ್ಪೃಹನಾದ ನಮ್ಮ ವಾಸುದೇವನ ಚಮತ್ಕಾರಕ್ಕೆ ಮರುಳಾಗಿ ಜನರು ತನಗೆ ಗೌರವ ಕೊಡುವದನ್ನು ನೋಡಿ, ಜನರ ಸ್ಥಿತಿಗೆ ಅಸಮಾಧಾನಪಟ್ಟು ಮುಂದೆ ಇಂಥ ಚಮತ್ಕಾರಗಳನ್ನು ಮಾಡಬಾರದೆಂದು ಅಂದುಕೊಂಡನು.

ಜನರು ಪ್ರತ್ಯಕ್ಷ ಫಲವನ್ನು ನೋಡುವವರಾದ್ದರಿಂದ ಅವರಲ್ಲಿ ಆಸ್ತಿಕ್ಯಬುದ್ಧಿಯನ್ನು ಹುಟ್ಟಿಸಬೇಕಾದರೆ ಸತ್ಪುರುಷರಾದವರು ಅವರ ಮನಸ್ಸನ್ನು ತಮ್ಮ ಕಡೆಗೆ ಒಲಿಸಿಕೊಳ್ಳುವದಕ್ಕಾಗಿ ಒಮ್ಮೊಮ್ಮೆ ದೈವೀ ಸಾಮರ್ಥ್ಯವನ್ನು ತೋರಿಸಬೇಕಾಗುತ್ತದೆ. ವೃತ್ತಿಯ ಪರೀಕ್ಷೆಯು ಬಹು ಜನರಿಗೆ ಆಗದ್ದರಿಂದ ಅಂಥವರು ದೈವೀಸಾಮರ್ಥ್ಯವನ್ನೇ ನೋಡುವದು ಬಹಳ; ನಿಷಿದ್ಧಾಚರಣೆಗಳ ಗಾಳಿಗೆ ಕೂಡಾ ನಿಲ್ಲದ ಸತ್ಕರ್ಮಶೀಲರಿಗೆ ದೈವೀಶಕ್ತಿಯು ನಿಶ್ಚಯವಾಗಿ ಪ್ರಾಪ್ತವಾಗುತ್ತದೆಂಬದಕ್ಕೆ ಸಂಶಯವಿಲ್ಲ. ಇದಕ್ಕೆ ನಮ್ಮ ಚರಿತ್ರನಾಯಕನ ಉದಾಹರಣೆಯು ಸರ್ವೋತ್ಕೃಷ್ಟವಾಗಿ ಒಪ್ಪುವದು. ವೇದವಿದ್ಯಾಮಹಿಮೆಯನ್ನು ಬೈಲಿಗೆಳೆಯಲಿಕ್ಕೆ ಇಂಥ ಸಮರ್ಥರೇ ಬೇಕು. ಪರಮ ಪವಿತ್ರವಾದ ವೇದಗಳಿಗೆ ಹೆಂಗಸರ ಹಾಡೆಂದು ಹೀಯಾಳಿಸುವ ನಮ್ಮಂಥ ಕ್ಷುಲ್ಲಕರು ವೇದಾಧ್ಯಾಯನಕ್ಕೆ ಅನಧಿಕಾರಿಗಳಲ್ಲದೆ ಮತ್ತೇನು? ವೇದಾರ್ಥಗಳನ್ನು ತಿಳಿದು, ಭೌತಿಕ ಶಾಸ್ತ್ರದೃಷ್ಟಿಯಿಂದ ಲೋಕೋಪಕಾರಮಾಡುವ ಸಾಮರ್ಥ್ಯವಾಗಲಿ, ವೇದಾಧ್ಯಯನದಿಂದ ಪವಿತ್ರತೆಯನ್ನ ಸಂಪಾದಿಸಿ ದೈವೀತೇಜಸ್ಸಿನಿಂದ ಲೋಕೋಪಕಾರ ಮಾಡುವ ಸಾಮರ್ಥ್ಯವಾಗಲಿ ಇಲ್ಲದ ನಾವು, ಹತವೀರ್ಯರಾಗಿ ವೇದಗಳನ್ನು ಔದಾಸೀನ್ಯದಿಂದ ಬಿಟ್ಟುಕೊಟ್ಟದ್ದಕ್ಕೆ ಕಾಲಮಹಿಮೆಯೆನ್ನಬೇಕೋ, ಅಥವಾ ಈಶ್ವರೀ ಸಂಕೇತವೆನ್ನಬೇಕೋ?

ತಿಳಿಯುದಾಗಿದೆ! ಇರಲಿ.

ಮೇಲೆ ಹೇಳಿದ ಚಮತ್ಕಾರದಿಂದ ವಾಸುದೇವನನ್ನು ಕಂಡು ಜನರಿಗೆ ಆದರವುಂಟಾಗಹತ್ತಿತು. ಅವರು ಅವನಿಗೆ ಶಾಸ್ತ್ರಿಗಳೆಂದು ಅನ್ನಹತ್ತಿದರು. ಈಗೀಗ ಪ್ರೌಢವಯಸ್ಸಿಗೆ ಬರಹತ್ತಿದ ನಮ್ಮ ವಾಸುದೇವನು ವಯಸ್ಸಿನ ಮಾನದಿಂದಲೂ, ವಿದ್ಯೆಯ ಪ್ರಭಾವದಿಂದಲೂ, ದೈವೀ ತೇಜಸ್ಸಿನಿಂದಲೂ ಬಹುಮಾನಕ್ಕೆ ಅಧಿಕಾರಿಯಾದ್ದರಿಂದ, ಜನರು ಅವನನ್ನು 'ಶಾಸ್ತ್ರಿ'ಗಳೆಂಬ ಹೆಸರಿನಿಂದ ಗೌರವಿಸಹತ್ತಿದ್ದು ಬಹು ಯೋಗ್ಯವಾಯಿತು. ನಾವಾದರೂ ಮುಂದಿನ ಕಥಾನಕದಲ್ಲಿ ನಮ್ಮ ಚರಿತ್ರನಾಯಕನಾದ ವಾಸುದೇವನಿಗೆ 'ಶಾಸ್ತ್ರಿ'ಗಳೆಂಬ ಹೆಸರನ್ನೇ ಉಪಯೋಗಿಸೋಣ. ಪುರಾಣವನ್ನು ಹೇಳುವ ಸರಣಿಯು ನಮ್ಮ ಶಾಸ್ತ್ರಿಗಳಿಗೆ ಚೆನ್ನಾಗಿ ಸಾಧಿಸಿದ್ದರಿಂದ, ಇವರ ಪುರಾಣಶ್ರವಣಕ್ಕೆ ಜನಸಮ್ಮರ್ದವು ಹೆಚ್ಚಾಗತೊಡಗಿತು. ಶಾಸ್ತ್ರಿಗಳು ವಿಷ್ಣುಪಂಚಾಯತನದ ಉಪಾಸನೆಯನ್ನೂ, ಶ್ರೀ ದತ್ತೋಪಾಸನೆಯನ್ನೂ ಮಾಡುತ್ತಿದ್ದರು. ದತ್ತಗುರುವಿನಲ್ಲಿ ಇವರ ವಿಶ್ವಾಸವು ಬಹಳ. ಅವರು ವಿರಕ್ತಸ್ವಭಾವದವರಾದ್ದರಿಂದ, ಹೆಚ್ಚಿನ ಪದಾರ್ಥಗಳನ್ನು ಹತ್ತರ ಸಂಗ್ರಹ ಮಾಡುತ್ತಿದ್ದಿಲ್ಲ. ಅವರ ವಿವೇಕ-ವೈರಾಗ್ಯಸಂಪನ್ನತೆಯನ್ನು ನೋಡಿ ಜನರು ಅವರಿಗೆ ಅವತಾರಿಕ ಪುರುಷರೆಂದು ಅನ್ನಹತ್ತಿದರು. ಅವರು ನಿತ್ಯವಾಗಿ ಅತಿಥಿ-ಅಭ್ಯಾಗತರ ಯೋಗಕ್ಷೇಮವನ್ನು ತಕ್ಕೊಳ್ಳದೆ ಎಂದೂ ಊಟಮಾಡುತ್ತಿದ್ದಿಲ್ಲ. ಅನಾಥ ಬ್ರಾಹ್ಮಣರ ಶವಸಂಸ್ಕಾರಕ್ಕೆ ಸ್ವತಃ ತಾವೇ ಟೊಂಕಕಟ್ಟಿ ನಿಲ್ಲುತ್ತಿದ್ದರು. ಜ್ಯೋತಿಷ್ಯ-ವೈದ್ಯಕ ವಿದ್ಯೆಗಳು ಇವರಿಗೆ ಅವಗತವಿದ್ದದರಿಂದ ಜನರು ಇವರಿಂದ ಅನಂತ ಉಪಕಾರಗಳನ್ನು ಹೊಂದಹತ್ತಿದರು. ಇವರ ಪ್ರವಾಸಕ್ಕೆ ಯಾವ ಪ್ರಕಾರದ ವಾಹನಗಳೂ ಬೇಕಾಗುತ್ತಿದ್ದಿಲ್ಲ. ಪಾದರಕ್ಷೆಗಳನ್ನು ಕೂಡಾ ಇವರು ಹಾಕಿಕೊಳ್ಳುತ್ತಿದ್ದಿಲ್ಲ! ಬ್ರಾಹ್ಮಣಸೇವೆ-ಏಕಾದಶಿ ಮೊದಲಾದ ವ್ರತಗಳು ಇವರಿಗೆ ಪ್ರಿಯವಾಗಿದ್ದವು. ಇವರು ಚಾಂದ್ರಾಯಣ ಎಂಬ ವ್ರತವನ್ನು ಸಂಪೂರ್ಣವಾಗಿ ಮುಗಿಸಿ ಗಾಯತ್ರೀಪುರಶ್ಚರಣವನ್ನು ಮಾಡಿದರು.

ವಾಸುದೇವ ಶಾಸ್ತ್ರಿಗಳಂತೆ ಉಪನಯನವಾದ ೧೨ ವರ್ಷಗಳವರೆಗೆ ಬ್ರಹ್ಮಚರ್ಯವನ್ನು ಪಾಲಿಸುವವರು ಈಗ ಯಾರೂ ಇಲ್ಲದ್ದರಿಂದ, ಯುಗಮಹಿಮೆಯಂತೆ ನಮ್ಮ ಹ್ರಾಸವಾಗುತ್ತ ನಡೆದಿರುವದೆಂದು ಹೇಳಬಹುದು. ಈಗಿನ ಕಾಲದಲ್ಲಿ ಎಷ್ಟೋ ಜನ ಮಾತಾ-ಪಿತೃಗಳು ತಮ್ಮ ಹುಡುಗರ ಉಪನಯನವಾಗಿ ಪಾಲಾಶಪೂಜಾವಿಧಾನವು ಮುಗಿಮುಗಿಯು ವಷ್ಟರಲ್ಲಿಯೇ ಲಗ್ನಕ್ಕಾಗಿ ವಧುವನ್ನು ನಿಶ್ಚಯಿಸುತ್ತಾರೆ. ಇಂಥವರು ತಮ್ಮ ಮಕ್ಕಳಿಗೆ ಬ್ರಹ್ಮಚರ್ಯವನ್ನು ಹ್ಯಾಗೆ ಪಾಲಿಸಹಚ್ಚುವರು? ಮಹಾಪುರುಷರ ಚರಿತ್ರಗಳನ್ನು ಮರ್ಮವರಿತು ಓದಿ ನಮ್ಮ ನಮ್ಮ ವೃತ್ತಿಯ ದೌರ್ಬಲ್ಯವನ್ನು ನಾವು ಹೋಗಲಾಡಿಸಿಕೊಳ್ಳದಿದ್ದರೆ ಹಿತಕರವಾಗದು!

---

## ಗೃಹಸ್ಥಾಶ್ರಮ ಪರಿಪಾಲನ.

ಸ್ವಶಾಸ್ತ್ರವಾಗಿ ಬ್ರಹ್ಮಚರ್ಯಾಶ್ರಮವನ್ನು ಪಾಲಿಸಿದ ಬಳಿಕ ವಾಸುದೇವ ಶಾಸ್ತ್ರಿಗಳು ಗೃಹಸ್ಥಾಶ್ರಮಕ್ಕೆ ಯೋಗ್ಯರಾದರು. ಮಾತೃಶ್ರೀಯವರಾದ ರಮಾಬಾಯಿಯವರು ತಮ್ಮ ಮಗನ ಲಗ್ನವಾಗಬೇಕೆಂದು ಬಯಸಹತ್ತಿದರು. ತಾಯಂದಿರು ತಮ್ಮ ಮಕ್ಕಳ ಎರಡು ಕೈಗಳಿಗೆ-ನಾಲ್ಕು ಕೈಗಳು ಯಾವಾಗ ಆದಾವೆಂದು ಬಯಸುತ್ತಿರುವದು ಸ್ವಾಭಾವಿಕವಾಗಿದೆ. ಸಾವಂತವಾಡಿಯಲ್ಲಿ "ಬಾಬಾಜಿಪಂತ ಗೋಡೆ" ಎಂಬವರೊಬ್ಬರು ಸದ್ಗೃಹಸ್ಥರಿದ್ದರು. ಅವರಿಗೆ ಉಪವರಳಾದ ಒಬ್ಬಳು ಮಗಳಿದ್ದಳು. ಹುಡುಗಿಯು ರೂಪ-ಗುಣಸಂಪನ್ನಳಾಗಿದ್ದಳು. ಈ ಸುಶೀಲೆಯನ್ನು ಯಾವ ಪುಣ್ಯವಂತನಿಗೆ ಕೊಡಬೇಕೆಂದು ಬಾಬಾಜಿಪಂತರು ಯೋಚಿಸುತ್ತಿರಲು, ಅವರಿಗೆ ನಮ್ಮ ವಾಸುದೇವ ಶಾಸ್ತ್ರಿಗಳಲ್ಲಿ ಭಕ್ತಿಯು ಹುಟ್ಟಿತು. ಕೂಡಲೆ ಅವರು ಮಾಣಗಾಂವಕ್ಕೆ ಬಂದು ಗಣೇಶಭಟ್ಟರನ್ನು ಪ್ರಾರ್ಥಿಸಲು, ಘಟಿತಾರ್ಥದಲ್ಲಿ ೩೬ ಗುಣಗಳು ಕೂಡಿ ಬಂದವು. ಆಗ ಬಾಬಾಜಿಪಂತರು ಗಣೇಶಭಟ್ಟರ ಒಪ್ಪಿಗೆಯನ್ನು ಪಡೆದು ತಮ್ಮ

ಮಗಳನ್ನು ವಾಸುದೇವ ಶಾಸ್ತ್ರಿಗಳಿಗೆ ಕೊಡುವದನ್ನು ನಿಶ್ಚಯಿಸಿದರು. ಲಗ್ನಕ್ಕಾಗಿ ಮುಹೂರ್ತವು ಗೊತ್ತುಮಾಡಲ್ಪಟ್ಟಿತು. ಬಾಬಾಜಿ ಪಂತರು ಮಗಳನ್ನು ಸಾಲಂಕೃತವಾಗಿ ಕನ್ಯಾದಾನ ಮಾಡಿಕೊಟ್ಟರು. ಈ ಮೇರೆಗೆ ವಾಸುದೇವ ಶಾಸ್ತ್ರಿಗಳು 'ಅನ್ನಪೂರ್ಣಾ'ಬಾಯಿಯವರ ಪಾಣಿ ಗ್ರಹಣ ಮಾಡಿ, ಗ್ರಹಸ್ಥಾಶ್ರಮಿಗಳಾದರು.

ವಿವಾಹಸಮಾರಂಭವು ನೆರವೇರಿದಾಗ ವಾಸುದೇವ ಶಾಸ್ತ್ರಿಗಳಿಗೆ ೨೧ನೇ ವರ್ಷವು ನಡೆಯುತ್ತಿತ್ತು. ಸೊಸೆಯು ಮನೆಗೆ ಬಂದದ್ದನ್ನು ನೋಡಿ ರಮಾಬಾಯಿಯವರು ಕಡು ಸಂಭ್ರಮಪಟ್ಟರು. ಅನ್ನಪೂರ್ಣಾ ಬಾಯಿಯು ವಿವೇಕಸಂಪನ್ನಳಾದ್ದರಿಂದ ಆಕೆಯು ಪತಿಸೇವೆಯಲ್ಲಿಯೂ, ಅತ್ತೆ-ಮಾವಂದಿರ ಸೇವೆಯಲ್ಲಿಯೂ ಆಸಕ್ತಳಾಗಿರುತ್ತಿದ್ದಳು. ಗಂಡನ ಮನೆಯವರು ಎಷ್ಟು ಬಡವರಿದ್ದರೂ ಆ ಸಾಧ್ವಿಗೆ ಸ್ವಲ್ಪಾದರೂ ಅಸಮಾ ಧಾನವುಂಟಾಗಿದ್ದಿಲ್ಲ. ಆಕೆಯು ಸದಾನಂದವೃತ್ತಿಯವಳಾಗಿದ್ದಳು. ಅನುರೂಪಳಾದ ಹೆಂಡತಿಯು ದೊರೆತದ್ದಕ್ಕಾಗಿ ಶಾಸ್ತ್ರಿಗಳು ಪರಮಾ ನಂದಬಟ್ಟು, ಪ್ರಾಪಂಚಿಕ ಸೌಖ್ಯವನ್ನು ಅನುಭವಿಸುತ್ತಿರಲು, ಗಣೇಶ ಭಟ್ಟರು ಇಹಲೋಕದ ಯಾತ್ರೆಯನ್ನು ಮುಗಿಸಿದರು. ತಂದೆಯ ಮರಣ ದಿಂದ ಶಾಸ್ತ್ರಿಗಳಿಗೆ ಕಡು ಖೇದವಾಯಿತು. ರಮಾಬಾಯಿಯವರಂತೂ ಮುಪ್ಪಿನ ಕಾಲಕ್ಕೆ ಸೌಭಾಗ್ಯವು ಸೂರೆಯಾಯಿತೆಂದು ಅಳತೆಗೆಟ್ಟು ಶೋಕ ಮಾಡಿದರು. ಆಗ ಶಾಸ್ತ್ರಿಗಳು ಧೈರ್ಯ ತಾಳಿ, ತಾಯಿಗೆ ಪರಿಪರಿ ಯಿಂದ ಸಮಾಧಾನ ಹೇಳಿ, ತಂದೆಯ ಔರ್ಧ್ವದೇಹಿಕ ಕ್ರಿಯೆಯನ್ನು ವಿಧಾನೋಕ್ತವಾಗಿ ಮುಗಿಸಿದರು ವಾಸುದೇವ ಶಾಸ್ತ್ರಿಗಳು ಪಿತೃಭಕ್ತಿ ಪರಾಯಣರಾದ್ದರಿಂದ, ಅವರು ತಂದೆಯ ಉತ್ತರಕ್ರಿಯೆಗಳನ್ನು ನಿರಾ ಲಸವಾಗಿಯೂ, ವ್ಯಂಗರಹಿತವಾಗಿಯೂ ಮಾಡಿದರು. ತಾಯಿ-ತಂದೆ ಗಳು ಬದುಕಿ ಇರುವಾಗ ಅವರನ್ನು ಪರಿಪರಿಯಿಂದ ಪೀಡಿಸಿ, ಅವರು ಸತ್ತ ಬಳಿಕ ಅವರ ಶ್ರಾದ್ಧಾದಿಗಳನ್ನು ಬಳ್ಳೇ ಭಕ್ತಿಪೂರ್ವಕವಾಗಿ ಮಾಡುವ ಮಾತೃಭಕ್ತರೂ, ಪಿತೃಭಕ್ತರೂ ಈಗಿನ ಕಾಲದಲ್ಲಿ ಬೇಕಾದಷ್ಟು ಜನರು ದೊರೆಯುವರು; ಆದರೆ ನಮ್ಮ ಶಾಸ್ತ್ರಿಗಳು ಇಂಥ ಜನರ ಮಾಲಿಕೆಯಲ್ಲಿ

ಬರತಕ್ಕವರಲ್ಲ. ಪೌರಾಣಿಕ ಕಾಲದ ಪ್ರಸಿದ್ಧ ಪಿತೃಭಕ್ತರಂತೆ ಇವರ ಉದಾತ್ತಾಚರಣೆಗಳಿದ್ದವು.

ವಾಸುದೇವಶಾಸ್ತ್ರಿಗಳಿಗೆ ಜ್ಯೋತಿಷಶಾಸ್ತ್ರದ ಲಕ್ಷ್ಯ ಬಹಳ ಇದ್ದದರಿಂದ ಅವರು 'ನೀಳಂಭಟ್ಟ ಪದ್ಯೆ' ಎಂಬ ಒಬ್ಬ ಪ್ರಸಿದ್ಧ ಜ್ಯೋತಿರ್ವಿದ್ವಾನರ ಬಳಿಯಲ್ಲಿ ಆರುತಿಂಗಳವರೆಗೆ ಓದಿ ತಮ್ಮ ಮನಸ್ಸಿನ ಇಚ್ಛೆಯನ್ನು ಪೂರ್ಣಪಡಿಸಿಕೊಂಡರು. ಪಂಚಾಂಗಗಳನ್ನು ಮಾಡಲಿಕ್ಕೂ, ಜನ್ಮಪತ್ರಿಕೆಗಳನ್ನು ತಯಾರಿಸಲಿಕ್ಕೂ, ಶಕುನಗಳ ಶುಭಾಶುಭ ಫಲಗಳನ್ನು ಸರಿಯಾಗಿ ಹೇಳಲಿಕ್ಕೂ, ಜನರ ಕಾರ್ಯಗಳ ಸಿದ್ಧ್ಯಸಿದ್ಧಿಗಳನ್ನು ಹೇಳಲಿಕ್ಕೂ ಅವರಿಗೆ ಬರಹತ್ತಿತು. ಈ ಉಪಯುಕ್ತ ವಿದ್ಯೆಯಿಂದ ಶಾಸ್ತ್ರಿಗಳ ಮಹತ್ವವು ಬೆಳೆಯುತ್ತ ಹೋಯಿತು. ಮುಂಜಾವಿನಿಂದ ಸಂಜೆಯವರೆಗೆ ಶಾಸ್ತ್ರಿಗಳ ಮನೆಯಲ್ಲಿ ಜನರ ಗದ್ದಲವು ವಿಶೇಷವಾಗಿರುತ್ತಿತ್ತು. ದೂರದೂರದಿಂದ ಜನರು ಶಾಸ್ತ್ರಿಗಳವರನ್ನು ಪ್ರಶ್ನೆ ಕೇಳಲಿಕ್ಕೆ ಬರುತ್ತಿದ್ದರು. ಬಂದ ಜನರನ್ನು ಸರಿಯಾಗಿ ಆದರಿಸಿ, ಅವರು ಕೇಳುವ ಪ್ರಶ್ನೆಗಳಿಗೆ ಶಾಸ್ತ್ರಿಗಳವರು ಮನಃಪೂರ್ವಕವಾಗಿ ಉತ್ತರ ಹೇಳುತ್ತಿದ್ದರು. ಸ್ನಾನ-ಸಂಧ್ಯಾದಿ ನಿತ್ಯಕರ್ಮಗಳಲ್ಲಿ ವೆಚ್ಚವಾಗುವ ವೇಳೆಯ ಹೊರತು ಉಳಿದ ಎಲ್ಲ ಹೊತ್ತಿನಲ್ಲಿ ಅವರು ಜನರಿಗೆ ಪ್ರಶ್ನೆಗಳನ್ನು ಹೇಳುವದರಲ್ಲಿಯೂ ವಿದ್ಯಾರ್ಥಿಗಳಿಗೆ ವಿದ್ಯಾಭ್ಯಾಸ ಮಾಡಿಸುವದರಲ್ಲಿಯೂ ತೊಡಗಿರುತ್ತಿದ್ದರು. ಒಟ್ಟಿಗೆ ಶಾಸ್ತ್ರಿಗಳು ಗೃಹಸ್ಥಧರ್ಮದಲ್ಲಿ ತಮ್ಮಿಂದ ಸಾಧಿಸಬಹುದಾದ ಪರೋಪಕಾರದ ಕೆಲಸಗಳನ್ನೆಲ್ಲ ಸಾಧಿಸಿಕೊಂಡರು. ಆಗಿನ ಕಾಲಕ್ಕೆ ಶಾಸ್ತ್ರಿಗಳವರ ಗೃಹವೆಂದರೆ ಹಸಿವೆ-ನೀರಡಿಕೆಗಳಿಂದ ಬಳಲಿದವರಿಗೆ ತೃಪ್ತಿಯನ್ನುಂಟುಮಾಡುವ ಅನ್ನಸತ್ರವೂ, ವಿದ್ಯಾರ್ಥಿಗಳಿಗೆ ವಿದ್ಯಾಮೃತಪಾನ ಮಾಡಿಸುವ ವಿದ್ಯಾಗೃಹವೂ, ರೋಗಾತುರರಿಗೆ ಧನ್ವಂತರೀ ಮಂದಿರವೂ ಆಗಿತ್ತೆಂದು ಹೇಳಿದರೆ ಅತಿಶಯೋಕ್ತಿಯಾಗಲಿಕ್ಕಿಲ್ಲ.

ಶಾಸ್ತ್ರಿಗಳವರು ಪ್ರತಿವರ್ಷ ವಾಡಿಗೆ ಹೋಗಿಬರುವ ಸಾಂಪ್ರದಾಯವನ್ನಿಟ್ಟುಕೊಂಡಿದ್ದರು. ಅವರು ಒಮ್ಮೊಮ್ಮೆ ಸಕುಟುಂಬವಾಗಿ ಹೋಗುತ್ತಿದ್ದರು. ಒಮ್ಮೆ ಅವರು ವಾಡಿಯಿಂದ ಕೊಲ್ಹಾಪುರದ ಮೇಲೆ

ಹಾದು ಬರುವಾಗ ಹಾದಿಯಲ್ಲಿ ಒಬ್ಬ ಮೂರ್ತಿಕಾರನು ಭೆಟ್ಟಿಯಾದನು. ಶಾಸ್ತ್ರಿಗಳಿಗೂ, ಆ ಮೂರ್ತಿಕಾರನಿಗೂ ಪರಸ್ಪರ ಪರಿಚಯವಾಗಿ ಶಾಸ್ತ್ರಿಗಳವರು ಅವನಿಂದ ಒಂದು ಉತ್ತಮವಾದ ಶ್ರೀ ದತ್ತಮೂರ್ತಿಯನ್ನು ಮಾಡಿಸಿಕೊಂಡರು. ಮೂರ್ತಿಕಾರನು ಚತುರನಿದ್ದುದರಿಂದ ಶಾಸ್ತ್ರಿಗಳ ಮನಮೆಚ್ಚುವಂಥ ಸುಂದರ ಮೂರ್ತಿಯನ್ನು ತಯಾರಿಸಿದನು. ಶಾಸ್ತ್ರಿಗಳವರು ಆ ಮೂರ್ತಿಯನ್ನು ಮಾಣಗಾವದಲ್ಲಿ ಪ್ರತಿಷ್ಠಿಸಿದರು. ಶ್ರೀ ಕ್ಷೇತ್ರ ವಾಡಿಯಂತೆ ಅಲ್ಲಿ ಎಲ್ಲ ಉತ್ಸವಗಳೂ ಜರುಗತೊಡಗಿದವು. ಶ್ರೀದತ್ತ ಸ್ಥಾಪನೆಯಾಗಿದ್ದ ಗುಡಿಯನ್ನು ಶಾಸ್ತ್ರಿಗಳವರು ತಾವೇ ಕೈಮುಟ್ಟ ಕಟ್ಟಿದ್ದರು ದೇವಾಲಯದ ಆಕಾರವಾದರೂ ವಾಡಿಯ ಪದ್ಧತಿಯನ್ನು ಬಿಟ್ಟಿದ್ದಿಲ್ಲ. ದೇವಾಲಯದ ಮುಂದೆ ಔದುಂಬರವೂ, ಎಡಬಲದಲ್ಲಿ ತುಳಸೀ ಗಿಡಗಳೂ ಶೋಭಾಯಮಾನವಾಗಿ ಕಾಣುತ್ತಿದ್ದವು. ದೇವಾಲಯದ ಸ್ಥಾಪನೆಯಾದಂದಿನಿಂದ ಶಾಸ್ತ್ರಿಗಳವರು ಬಹುತರ ಮನೆಯ ಕಡೆಗೆ ವಿಶೇಷವಾಗಿ ಬರುತ್ತಿದ್ದಿಲ್ಲ. ಎಂಟು ತಾಸಿನ ಸುಮಾರಕ್ಕೆ ಊಟಕ್ಕೊಮ್ಮೆ ಬರುತ್ತಿದ್ದರು. ಆಗ್ಗೇ ಅವರು ಮನೆತನದ ಎಲ್ಲ ಯೋಗಕ್ಷೇಮವನ್ನು ತಕ್ಕೊಳ್ಳುತ್ತಿದ್ದರು. ಉಳಿದ ಕಾಲದಲ್ಲಿ ದೇವಾಲಯದಲ್ಲಿಯೇ ವಾಸಿಸಿ, ಸತ್ಕರ್ಮಾಚರಣೆಯಲ್ಲಿ ನಿಮಗ್ನರಾಗಿರುತ್ತಿದ್ದರು.

ಆಗಿನ ಕಾಲದಲ್ಲಿ ಶಾಸ್ತ್ರಿಗಳ ದಿನಚರ್ಯವೆಂದರೆ, ಪ್ರಾತಃಕಾಲದಲ್ಲಿ ನಾಲ್ಕು ಗಂಟೆಗೆ ಎದ್ದು ಪ್ರಾತಃಸ್ಮರಣ ಮಾಡುವದೂ, ಸ್ನಾನ-ಸಂಧ್ಯಾದಿ ಬ್ರಹ್ಮಕರ್ಮಗಳನ್ನು ಮಾಡುವದೂ, ನರಸೋಬನವಾಡಿಯಂತೆ ದತ್ತಗುರುವಿನ ತ್ರಿಕಾಲಪೂಜೆ ಮಾಡುವದೂ ಆಗಿದ್ದವು. ಅವರು ನಿತ್ಯದಲ್ಲಿ ಮಧ್ಯಾಹ್ನದ ಮೂರುಗಂಟೆಯ ಸುಮಾರಕ್ಕೆ ದೇವರ ಸನ್ನಿಧಿಯಲ್ಲಿ ಕುಳಿತು ಪುರಾಣವನ್ನು ಹೇಳುತ್ತಿದ್ದರು. ಗುರುಪ್ರತಿಪದೆ, ಗುರುದ್ವಾದಶಿ ಮೊದಲಾದ ತಿಥಿಗಳಲ್ಲಿ ಉತ್ಸವವನ್ನು ಮಾಡುತ್ತಿದ್ದರು. ಉತ್ಸವದ ನಿಮಿತ್ಯವಾಗಿ ಜನಸ್ತೋಮವು ವಿಶೇಷವಾಗಿ ಕೂಡಹತ್ತಿತು. ಬರಬರುತ್ತ ಪ್ರತಿ ಶನಿವಾರಕ್ಕೊಮ್ಮೆ ಸಹ ಜನಸಮ್ಮರ್ದವು ಹೆಚ್ಚಾಗತೊಡಗಿತು. ಪ್ರತಿ ಶನಿವಾರಕ್ಕೆ ದೇವರ ಸೇವೆಗಾಗಿ ಬಂದ ಜನರು ಸಮಪಿ

ಸಿದ ದ್ರವ್ಯವು ಸುಮಾರು ೨೦೦ ರೂಪಾಯಿಗಳ ವರೆಗೆ ಆಗಹತ್ತಿತು. ಈ ದ್ರವ್ಯದ ವಿನಿಯೋಗವು ದೇವಸ್ಥಾನದ ಕಡೆಗೆ ಆಗಹತ್ತಿತು. ದೇವಸ್ಥಾನದ ಲೌಕಿಕ ಬಾಬುಗಳನ್ನು ನೋಡಲಿಕ್ಕೆ ಶಾಸ್ತ್ರಿಗಳವರು ಪಂಚರನ್ನು ನೇಮಿಸಿದರು. ದೇವದರ್ಶನಕ್ಕಾಗಿ ದೂರದೂರದಿಂದ ಬಂದ ಜನರು ಶಾಸ್ತ್ರಿಗಳ ಮನೆಯಲ್ಲಿಯೇ ಆತಿಥ್ಯವನ್ನು ಹೊಂದುತ್ತಿದ್ದರು. ದೇವಸ್ಥಾನದ ಎಣ್ಣೆ, ತುಪ್ಪಗಳ ಖರ್ಚು ಶಾಸ್ತ್ರಿಗಳ ಮನೆಯಿಂದಲೇ ಸಾಗುತ್ತಿತ್ತು. ಇದನ್ನರಿತು ದೇವಸ್ಥಾನದ ಪಂಚರು ಬಂದ ಉತ್ಪನ್ನದ $\frac{1}{4}$ ಭಾಗವನ್ನು ಶಾಸ್ತ್ರಿಗಳ ಸಮ್ಮತಿಯಿಂದ ಅವರ ಮನೆಗೆ ಮುಟ್ಟಿಸುತ್ತಿದ್ದರು. ಶಾಸ್ತ್ರಿಗಳವರ ಮಾತೃಶ್ರೀಯವರೂ, ಹೆಂಡತಿಯವರೂ ನಿರಾಲಸದಿಂದ ಅತಿಥಿಗಳ ಯೋಗಕ್ಷೇಮವನ್ನು ಭಕ್ತಿಪೂರ್ವಕವಾಗಿ ತಕ್ಕೊಳ್ಳುತ್ತಿದ್ದರು.

ಶಾಸ್ತ್ರಿಗಳವರಿಗೆ ಬಳಗದವರು ಬಹಳ; ಮನೆಯಲ್ಲಿ ತಾಯಿ, ಹಾಗು ಹೆಂಡತಿಯ ಹೊರತು ಐದು ಮಂದಿ ಭಗಿನಿಯರೂ, ಇಬ್ಬರು ತಮ್ಮಂದಿರೂ ಇದ್ದರು. ಇವರೆಲ್ಲರ ಸಂಗಡ ಶಾಸ್ತ್ರಿಗಳವರು ಪ್ರೇಮದಿಂದ ವರ್ತಿಸುತ್ತಿದ್ದರು. ನಿಃಸ್ವಾರ್ಥಿಗಳಾದ ಇವರು ನಿರ್ಹೇತುಕವಾಗಿ ಜಗತ್ತಿನ ಜನರ ಮೇಲೆಯೇ ಪ್ರೇಮ ಮಾಡುತ್ತಿರಲು, ಆಪ್ತರನ್ನು ಪ್ರೀತಿಸುತ್ತಿರುವದು ಆಶ್ಚರ್ಯದ ಮಾತಲ್ಲ! ಇವರು ಗೃಹಸ್ಥಧರ್ಮದಂತೆ ಬಂಧುಗಳ ಕೂಡ ತಾರತಮ್ಯದಿಂದ ನಡೆಯುತ್ತಿದ್ದರು. ಇವರಲ್ಲಿ ನೀತಿಯು ಬಹಳ; ದಾನ ಧರ್ಮಗಳನ್ನು ಸ್ವೀಕರಿಸುವದು ಬಹುತರವಾಗಿ ಇವರಿಗೆ ಸೇರುತ್ತಿದ್ದಿಲ್ಲ. ಒಮ್ಮೆ ಇವರ ತಮ್ಮನಾದ ಸೀತಾರಾಮನು ಒಬ್ಬ ಗೃಹಸ್ಥನ ಮನೆಗೆ ಊಟಕ್ಕೆ ಹೋದಾಗ ಗೋದಾನವನ್ನು ಸ್ವೀಕರಿಸಿದನು. ಯಜಮಾನನು ಸಂಕಲ್ಪವನ್ನು ಮಾಡಿ ನೀರನ್ನು ಬಿಡಲು, ಸೀತಾರಾಮನಿಗೆ ಪೀಡೆಯುಂಟಾಗಿ ಆತನು ಅಸ್ವಸ್ಥನಾದನು. ಈ ಸಂಗತಿಯನ್ನು ಶಾಸ್ತ್ರಿಗಳು ಕೇಳಿ ಲಗುಬಗೆಯಿಂದ ಬಂದು ಗೋದಾನವನ್ನು ಸ್ವೀಕರಿಸಿದ್ದಕ್ಕಾಗಿ ಸೀತಾರಾಮನಿಗೆ ಶಾಸ್ತ್ರೋಕ್ತವಾದ ಪ್ರಾಯಶ್ಚಿತ್ತವನ್ನು ಕೊಡಿಸಿದರು; ಹಾಗು ದಾನವಾಗಿ ಬಂದ ಆ ಆಕಳ

ವನ್ನೂ, ಅದರ ಕ್ರಯದ ಇಮ್ಮಡಿಯಷ್ಟು ಹಣವನ್ನೂ ಬ್ರಾಹ್ಮಣರಿಗೆ ಸಮರ್ಪಿಸಿದರು. ಇಷ್ಟಾದ ಮೇಲೆ ಸೀತಾರಾಮನಿಗೆ ಸ್ವಸ್ಥತೆಯುಂಟಾಗಿ ಎದ್ದು ಕುಳಿತನು. ಹೀಗೆ ಆಗಲು ಕಾರಣವೇನೆಂದು ಜನರು ಕೇಳಲು, ಶಾಸ್ತ್ರಿಗಳು ಪ್ರತಿಗೃಹದ ಧರ್ಮವನ್ನು ಹೇಳಿದರು. ಸಂಕಲ್ಪಪೂರ್ವಕವಾದ ದಾನವನ್ನು ಸ್ವೀಕರಿಸಬಾರದೆಂದು ಶಾಸ್ತ್ರಿಗಳು ಅನ್ನುತ್ತಿದ್ದರು. ಕಾಮನಾಪರವಾದ ದಾನವು ಬಾಧಿಸದೆ ಬಿಡುದಿಲ್ಲಾದ್ದರಿಂದ, ಸಾಂಸಾರಿಕರು ಬಹು ಎಚ್ಚರದಿಂದ ಪ್ರತಿಗೃಹಕ್ಕೆ ಮನಸ್ಸು ಹಾಕಬೇಕೆಂದು ಅವರು ಜನರಿಗೆ ಹೇಳುತ್ತಿದ್ದರು. ದುಡ್ಡಿನ ಆಶೆಗೆ ಬಿದ್ದು ಸಿಕ್ಕ ಸಿಕ್ಕ ಹಾಗೆ ದಾನವನ್ನು ಸ್ವೀಕರಿಸುವ ನಾವು, ಶಾಸ್ತ್ರಿಗಳವರ ಮಾತಿನ ರಹಸ್ಯವನ್ನು ಆಲೋಚಿಸುವದು ಯೋಗ್ಯವಾಗಿದೆ. ಮುಂದಿನ ಪ್ರಕರಣದಲ್ಲಿ ಬರೆಯಲ್ಪಡುವ ಶಾಸ್ತ್ರಿಗಳವರ ಉಪಾಸನಾಧರ್ಮದಲ್ಲಿಯಾದರೂ ಅವರ ಈ ನಿಸ್ಪೃಹವೃತ್ತಿಯು ವಿಚಾರವು ಬಹು ಸ್ಪಷ್ಟವಾಗಿ ವ್ಯಕ್ತವಾಗಿರುತ್ತದೆ. ದೊಡ್ಡವರ ಮಾತೇ ದೊಡ್ಡದು! ಯಾವ ಆಶ್ರಮದಲ್ಲಿದ್ದರೂ ಅವರು ತಮ್ಮ ಸ್ವಾಭಾವಿಕವಾದ ಸರಳ ವೃತ್ತಿಯನ್ನು ಎಂದೂ ಬಿಡುವದಿಲ್ಲ. ಆದ್ದರಿಂದಲೇ ಅವರ ಪ್ರತಿಯೊಂದು ಪ್ರಸಂಗದ ವರ್ಣನವು ನಮಗೆ ಬೋಧಪ್ರದವಾಗಿರುತ್ತದೆ.

---

## ತೀರ್ಥಯಾತ್ರೆಗಳೂ-ಸಂನ್ಯಾಸಗ್ರಹಣವೂ.

ಈ ಮೇರೆಗೆ ಮಾಣಗಾವದಲ್ಲಿ ಸ್ಥಾಪಿಸಲ್ಪಟ್ಟ ಶ್ರೀ ದತ್ತಮೂರ್ತಿಯ ಉತ್ಸವವು ಏಳು ವರ್ಷಗಳ ವರೆಗೆ ಸಾಗಲು, ಶಾಸ್ತ್ರಿಗಳವರ ಮನಸ್ಸಿನಲ್ಲಿ ಅಗ್ನಿಹೋತ್ರ ಇಡಬೇಕೆಂಬ ವಿಚಾರವು ಹುಟ್ಟಿತು. ಕೂಡಲೆ ಅವರು ದೇವಸ್ಥಾನದ ಮುಂದೆ ಇರುವ ಧರ್ಮಶಾಲೆಯಲ್ಲಿ ಅಗ್ನಿಹೋತ್ರವನ್ನಿಟ್ಟರು. ಈ ಅಗ್ನಿಹೋತ್ರವು ಪ್ರಾರಂಭವಾದ ಒಂದೇ ತಿಂಗಳ ಮೇಲೆ ಇವರು ಋಗ್ವೇದದ ೬೪ ಅಧ್ಯಾಯಗಳ ಸಂಹಿತೆಯ ಸ್ವಾಹಾಕಾರವನ್ನು ಮಾಡಿದರು. ಸ್ವಾಹಾಕಾರದಂತಹ ಮಹತ್ವದ ಪ್ರಸಂಗದಲ್ಲಿಯೂ ನಮ್ಮ

ಶಾಸ್ತ್ರಿಗಳವರಿಗೆ ಅನ್ಯರ ಸಹಾಯವು ಬೇಕಾಗಲಿಲ್ಲ. ಹೋಮಧೂಮ ದಿಂದ ಮಾಣಗಾವವು ಪರಿಶುದ್ಧವಾಯಿತು. ತೇಜೋವಂತರಾದ ನಮ್ಮ ಶಾಸ್ತ್ರಿಗಳ ಅಗ್ನಿಹೋತ್ರ ಕುಂಡದಲ್ಲಿ ಯಜ್ಞೇಶ್ವರನು ಮೂರ್ತಿಮತ್ತಾಗಿ ವಾಸವಾಗಿರುವನೆಂಬಂತೆ ಭಾಸವಾಗುತ್ತಿತ್ತು. ಈ ಮೇರೆಗೆ ಮಾಣ ಗಾವದ ಪುಣ್ಯ ಭೂಮಿಯಲ್ಲಿ ಶಾಸ್ತ್ರಿಗಳವರಿಂದ ಆಗಬೇಕಾದ ಸತ್ಕರ್ಮ ಗಳು ಸಂಪೂರ್ಣವಾಗಲು, ಅವರಿಗೆ ಅಲ್ಲಿಂದ ಉತ್ತರಪ್ರಾಂತಕ್ಕೆ ಪ್ರಯಾಣ ಬೆಳಿಸಲು ಶ್ರೀ ದತ್ತಪ್ರಭುವಿನಿಂದ ಅಪ್ಪಣೆಯು ಸಿಕ್ಕಿತು.

ಈ ಪ್ರಕಾರ ಭಗವಾನ್ ದತ್ತಗುರುವಿನಿಂದ ಅಪ್ಪಣೆಯಾಗಲು, ಶಾಸ್ತ್ರಿಗಳವರಿಗೆ ದೊಡ್ಡ ಆಲೋಚನೆಯು ಬಿದ್ದಿತು. ಮಾಣಗಾವದಲ್ಲಿ ಬಹು ದೊಡ್ಡ ಪ್ರಮಾಣದಿಂದ ನಡೆದಿರುವ ಶ್ರೀ ದತ್ತೋತ್ಸವವನ್ನು ಬಿಟ್ಟು ಹೋಗಲಿಕ್ಕೆ ಅವರ ಮನಸ್ಸು ಆಗಲಿಲ್ಲ. ಕರ್ತವ್ಯನಿಷ್ಠರಿಗೆ ಹಿಡಿದ ಕೆಲಸ ಬಿಡಬೇಕೆಂದರೆ ಜೀವದಸುತ್ತ ಬರುತ್ತದೆಂಬ ಮಾತು ಅನುಭವಸಿದ್ಧ ವಾದದ್ದು. ಇಲ್ಲಿ ಅವರಿಗೆ ನಡೆದ ಕೆಲಸಗಳನ್ನು ಬಿಟ್ಟು ಹೋಗುವದೂ ಕಷ್ಟವಾಯಿತು; ದತ್ತಗುರುವಿನ ಅಪ್ಪಣೆ ಮೀರುವದೂ ಕಷ್ಟವಾಯಿತು. ಹೀಗೆ ಶಾಸ್ತ್ರಿಗಳವರ ಮನಸ್ಸು ಇತ್ತಂಡವಾಗಿ, ಅವರು ದಿನಮೇಕ ಮಾಡು ತ್ತಿರಲು, ಸಾವಂತವಾಡಿಯಲ್ಲಿರುವ ನಾರೋಪಂತ ಉಕೀಡವೆ ಎಂಬೊಬ್ಬ ಭಾವಿಕ ಗೃಹಸ್ಥನ ಸ್ವಪ್ನದಲ್ಲಿ ಶ್ರೀ ದತ್ತಾತ್ರೇಯನು ಬಂದು ಹೇಳಿದ್ದೇನಂದರೆ:—"ವಾಸುದೇವ ಶಾಸ್ತ್ರಿಗಳಿಗೆ ಉತ್ತರಪ್ರಾಂತಕ್ಕೆ ಹೋಗಲು ಅಪ್ಪಣೆಯಾಗಿದ್ದು, ಅವರು ಇನ್ನೂ ಹೋಗದೆ, ಇಲ್ಲಿಯೇ ತೊಳಲಾಡುತ್ತಾರೆ. ಕಾರಣ ಅವರಿಗೆ ತೀವ್ರವಾಗಿ ಮಾಣಗಾವವನ್ನು ಬಿಡಲಿಕ್ಕೆ ಸೂಚಿಸಬೇಕು!"

ಈ ಮೇರೆಗೆ ಸ್ವಪ್ನಬಿದ್ದದ್ದನ್ನು ತಿಳಿದು ನಾರೋಪಂತನು ಎಚ್ಚತ್ತು ಶಾಸ್ತ್ರಿಗಳವರ ಕಡೆಗೆ ಬಂದು ಸ್ವಪ್ನದ ಸಂಗತಿಯನ್ನು ಅವರ ಮುಂದೆ ತಿಳಿಸಿದನು. ಹೀಗೆ ಶ್ರೀದತ್ತ ಮಹಾರಾಜನ ಒತ್ತಾಯವು ಬಹಳವಾದ್ದ ರಿಂದ ಶಾಸ್ತ್ರಿಗಳವರು ಮಾಣಗಾವಕ್ಕೆ ನಮಸ್ಕಾರ ಮಾಡುವದನ್ನು ನಿಶ್ಚಯಿಸಿದರು. ಶಾಸ್ತ್ರಿಗಳವರು ತಮ್ಮ ಊರು ಬಿಟ್ಟು ಹೋಗುವ

ರೆಂದು ತಿಳಿದು ಗ್ರಾಮವಾಸಿಗಳಿಗೆ ಬಹಳ ವ್ಯಸನವಾಯಿತು. ನಿಶ್ಚಿತವಾದ ದಿವಸ ಶಾಸ್ತ್ರಿಗಳವರು ಸ್ನಾನ-ಸಂಧ್ಯಾದಿ ನಿತ್ಯಕರ್ಮಗಳನ್ನು ತೀರಿಸಿಕೊಂಡು, ಶ್ರೀ ದತ್ತಮೂರ್ತಿಯನ್ನು ಸಂಗಡ ತಕ್ಕೊಂಡು ಸಕುಟುಂಬವಾಗಿ ಶ್ರೀ ನರಸಿಂಹ ಕ್ಷೇತ್ರಕ್ಕೆ ಪ್ರಯಾಣ ಬೆಳೆಸಿದರು. ಮಾಣಗಾವದ ಜನರು ಶಾಸ್ತ್ರಿಗಳವರನ್ನು ಅತಿ ಕಷ್ಟದಿಂದ ಕಳಿಸಿ, ಆ ದಿನವೆಲ್ಲ ಔದಾಸಿನ್ಯದಿಂದ ಕಾಲಹರಣ ಮಾಡಿದರು. ಶಾಸ್ತ್ರಿಗಳವರು ಮೂರ್ತಿಯನ್ನು ಒಯ್ದ ಬಳಿಕ ಮಾಣಗಾವದ ಜನರು ತೆರವಾದ ಆ ದತ್ತಸಿಂಹಾಸನದಲ್ಲಿ ಉತ್ಸವಮೂರ್ತಿಯನ್ನು ಸ್ಥಾಪಿಸಿಕೊಂಡು ಆರಾಧಿಸಹತ್ತಿದರು.

ಇತ್ತ ಮಾಣಗಾವದಿಂದ ಹೊರಟ ಶಾಸ್ತ್ರಿಗಳವರು, ಪಯಣದ ಮೇಲೆ ಪಯಣವನ್ನು ಮಾಡುತ್ತ ನರಸೋಬನವಾಡಿಗೆ ಬಂದು ಮುಟ್ಟಿದರು. ಈ ಸಾರೆ ಶಾಸ್ತ್ರಿಗಳವರು ವಾಡಿಯಲ್ಲಿ ಒಂದು ವರುಷದ ವರೆಗೆ ಇದ್ದರು. ಈ ಪುಣ್ಯಶಾಲಿಗಳಾದ ದಂಪತಿಗಳು ಒಂದು ಧರ್ಮಶಾಲೆಯಲ್ಲಿ ಬಿಡಾರವನ್ನು ಮಾಡಿಕೊಂಡಿದ್ದರು. ಶುಕ್ಲವೃತ್ತಿಯಿಂದ ಇವರ ಉಪಜೀವಿಕೆಯು ಸಾಗಹತ್ತಿತು. ಸ್ನಾನ-ಸಂಧ್ಯಾದಿ ಕರ್ಮಗಳೂ ಅಗ್ನಿಹೋತ್ರವೂ ಯಥಾಪ್ರಕಾರವಾಗಿ ನಡೆದವು. ಶಾಸ್ತ್ರಿಗಳವರು ವಾಡಿಗೆ ಬಂದಾಗ ಅನ್ನಪೂರ್ಣಾಬಾಯಿಯವರು ಗರ್ಭಿಣಿಯಿದ್ದರು. ಯಾತ್ರಿಕರ ಅನುಕೂಲಕ್ಕಾಗಿ ಕಟ್ಟಿಸಿದ ಅಲ್ಲಿಯ ಒಂದು ಛತ್ರದಲ್ಲಿ ಅವರು ಪ್ರಸೂತರಾದರು; ಆದರೆ ಹುಟ್ಟಿದ ಶಿಶುವು ಕೂಡಲೆ ಮೃತಪಟ್ಟಿತು. ಕೂಸು ಇಲ್ಲದಂತಾದ್ದರಿಂದ ಬಾಣಂತಿತನವು ಬೇಗನೆ ಮುಗಿಯಿತು. ಬಾಣಂತಿತನವು ನಡೆದಾಗ ಶಾಸ್ತ್ರಿಗಳವರು ಕುಟುಂಬದ ಯೋಗಕ್ಷೇಮವನ್ನು ಬಹು ಜಾಗರೂಕತೆಯಿಂದ ತಕ್ಕೊಳ್ಳುತ್ತಿದ್ದರು. ವಾಡಿಯಲ್ಲಿಯೇ ೩೦-೩೫ ವರ್ಷಗಟ್ಟಲೆ ಶ್ರೀಗುರುಸೇವೆಯನ್ನು ಮಾಡಿಕೊಂಡಿದ್ದ ಶಾಸ್ತ್ರಿಗಳವರ ಅಬಚಿಯು ಬಾಣಂತಿಯ ಶುಶ್ರೂಷೆಯನ್ನು ಮಾಡಿದಳು.

ಕುಟುಂಬದ ಬಾಣಂತಿತನದ ಕೆಲಸವು ಮುಗಿದ ಬಳಿಕ ಶಾಸ್ತ್ರಿಗಳವರು ಛತ್ರಬಿಟ್ಟು ಬ್ರಹ್ಮಾನಂದಸ್ವಾಮಿಗಳ ಮಠದ ಮೇಲಿರುವ ಉಪ್ಪರಿಗೆಯಲ್ಲಿ ಬಂದು ಇರಹತ್ತಿದರು. ಈ ಪ್ರಶಸ್ತವಾದ ಸ್ಥಳದಲ್ಲಿ ಶಾಸ್ತ್ರಿಗಳ

ವರ ಅನ್ನಸಂತರ್ಪಣೆಗೆ ಪ್ರಾರಂಭವಾಯಿತು. ಇವರ ಶುಕ್ಲವೃತ್ತಿಯ ಪವಿತ್ರಾನ್ನದ ಸೇವನಕ್ಕೆ ಊರೊಳಗಿನ ಜನರು ಬರಹತ್ತಿದರು. ಒಮ್ಮೊಮ್ಮೆ ೨೦-೨೫ ರವರೆಗೆ ಎಲೆಗಳು ಬೀಳುತ್ತಿದ್ದವು. ಸಂನ್ಯಾಸಿಗಳು, ಭಿಕ್ಷೆಗೆ ನಿಮ್ಮಲ್ಲಿಗೇ ಬರುತ್ತೇವೆಂದು ಆಗ್ರಹಪೂರ್ವಕವಾಗಿ ಶಾಸ್ತ್ರಗಳಿಗೆ ಹೇಳಿ ಬರುತ್ತಿದ್ದರು. ಇವರೆಲ್ಲರಿಗೆ ಅನ್ನಪೂರ್ಣಾಬಾಯಿಯವರೊಬ್ಬರೇ ಅಡಿಗೆಯನ್ನು ಮಾಡಿ ಹಾಕುತ್ತಿದ್ದರು. ಇವರ ಕೈಯೊಗಿನ ಅಡಿಗೆಯು ಬಲು ರುಚಿಕರವಾಗುತ್ತಿತ್ತು. ಒಂದು ದಿನ ಮೌನೀಬುವಾ ಎಂಬ ಸ್ವಾಮಿಗಳು ಶಾಸ್ತ್ರಗಳವರನ್ನು ಕುರಿತು:—ಶಾಸ್ತ್ರಗಳೇ, ನಿಮ್ಮ ಮನೆಗೆ ಈ ದಿನ ಭಿಕ್ಷೆಗೆ ಯಾರಾದರು ಸಂನ್ಯಾಸಿಗಳು ಬರುವರೋ? ಎಂದು ಕೇಳಿದರು. ಅದಕ್ಕೆ ಶಾಸ್ತ್ರಗಳವರು:—ಇನ್ನೂ ಯಾರೂ ಹೇಳಿಲ್ಲವೆಂದು ಹೇಳಿದರು. ವಾಡಿಯಲ್ಲಿ ಪೂಜಾರಿಗಳ ಮನೆಗಳೇ ಬಹಳ. ಅವರಿಗೆ ಅಶೌಚವು ಬಂದದ್ದರಿಂದ, ಸಂನ್ಯಾಸಿಗಳ ಭಿಕ್ಷೆಗೆ ಮಾರ್ಗವೇ ಇದ್ದಿಲ್ಲ. ಎಲ್ಲ ಸಂನ್ಯಾಸಿಗಳು ಲಂಘನ ಮಾಡುವ ಪ್ರಸಂಗವೇ ಬಂದಿತ್ತು. ಆದ್ದರಿಂದ ಮೌನೀಸ್ವಾಮಿಗಳವರು ಶಾಸ್ತ್ರಗಳವರಿಗೆ ಮನೆಯಲ್ಲಿ ಅಡಿಗೆ ಮಾಡಿಸಲಿಕ್ಕೆ ಹೇಳಿದರು.

ಶಾಸ್ತ್ರಗಳ ಮನೆಯೆಂದರೆ ಶ್ರೀಮಂತರ ಮನೆಯಲ್ಲ; ಸುದಾಮನ ಮನೆಯು. ಶುಕ್ಲವೃತ್ತಿ ಮಾಡಿ ಕಾಲುಪಾವು ಕಾಳು ತಂದ ಹೊರತು, ಮಧ್ಯಾಹ್ನಕ್ಕೆ ಒಲೆ ಹೊತ್ತಿಕ್ಕುವ ಹಾಗಿಲ್ಲ. ಇಂಥವರ ಮನೆಗೆ ಈ ದಿನ ವಾಡಿಯೊಳಗಿನ ಎಲ್ಲ ಸಂನ್ಯಾಸಿಗಳು ಭಿಕ್ಷಾವಂದನಕ್ಕೆ ಬರುವರೆಂದ ಬಳಿಕ ಶಾಸ್ತ್ರಗಳವರು ಆಲೋಚನೆಯಲ್ಲಿ ಬೀಳಬಹುದಾಗಿತ್ತು; ಆದರೆ ಅವರು ಕಿಂಚಿತ್ತಾದರೂ ಆಲೋಚಿಸದೆ, ಶ್ರೀದತ್ತನು ಸಮರ್ಥನಿದ್ದಾನೆಂದು ನುಡಿದು, ಊರೊಳಗೆ ಭಿಕ್ಷೆಗೆ ಹೋದರು. ಆ ದಿನ ಶುಕ್ಲವೃತ್ತಿಯಲ್ಲಿ ಬಂದದ್ದನ್ನೆಲ್ಲ ಅಡಿಗೆ ಮಾಡಿಸಿದರು. ಆ ದಿನ ಶಾಸ್ತ್ರಗಳವರ ಮನೆಯಲ್ಲಿ ಪ್ರಸಾದಕ್ಕೆ ಬಹು ಜನರು ಕೂಡಿದರು. ಶಾಸ್ತ್ರಗಳವರು ಸಮಾಧಾನಪೂರ್ವಕವಾಗಿ ಎಲ್ಲರನ್ನೂ ತೃಪ್ತಿಪಡಿಸಿದರು. ಶಾಸ್ತ್ರಗಳವರ ಕುಟಂಬಕ್ಕಿದ್ದ ಅನ್ನಪೂರ್ಣಾಬಾಯಿಯೆಂಬ ಹೆಸರು ಸಾರ್ಥಕವಾಗಿರುವ

ದೆಂದು ಎಲ್ಲ ಜನರೂ ಅಂದರು. ಮುಂದೆ ಶಾಸ್ತ್ರಿಗಳವರ ಮನೆಯಲ್ಲಿ ಇದೇ ಪರಿಪಾಠವು ಬಿದ್ದುಹೋಯಿತು. ಅತಿಥಿಗಳೂ, ಸಂನ್ಯಾಸಿಗಳೂ ಶಾಸ್ತ್ರಿಗಳವರ ಮನೆಯಲ್ಲಿ ಪ್ರಸಾದ ಗ್ರಹಣಮಾಡಿ ತೃಪ್ತರಾಗುತ್ತಿದ್ದರು. ವಾಡಿಯಲ್ಲಿದ್ದಾಗ ಶಾಸ್ತ್ರಿಗಳವರು "ಅತಿಥಿ ದೇವೋ ಭವ" ಎಂಬಂತೆ ಇದೊಂದು ಬಗೆಯ ಉಪಾಸನೆಯನ್ನೇ ಮಾಡಿದರೆಂದು ಹೇಳಬಹುದು.

ಈ ಮೇರೆಗೆ ಶಾಸ್ತ್ರಿಗಳವರು ಶುಕ್ಲವೃತ್ತಿಯಿಂದ ಅನ್ನದಾನವನ್ನು ನಡಿಸಿರಲು, ಇವರಲ್ಲಿದ್ದ ಯೋಗ್ಯತೆಯನ್ನು ಅರಿತು, ಆ ಕಾಲದಲ್ಲಿ ವಾಡಿಯಲ್ಲಿದ್ದ ಪ್ರಸಿದ್ಧ ಸಂನ್ಯಾಸಿಗಳಾದ ಶ್ರೀ ಗೋವಿಂದಸ್ವಾಮಿ ಮಹಾರಾಜರು ಹಾಗು ಶ್ರೀ ಮೌನೀಸ್ವಾಮಿ ಮಹಾರಾಜರು ಮೊದಲಾದವರು ಶಾಸ್ತ್ರಿಗಳವರನ್ನು ಬಹಳವಾಗಿ ಆದರಿಸುತ್ತಿದ್ದರು. ಶಾಸ್ತ್ರಿಗಳಾದರೂ ಗೋವಿಂದ ಸ್ವಾಮಿಗಳನ್ನು ಗುರುಗಳೆಂದು ಭಾವಿಸಿದ್ದರು. ಗೋವಿಂದ ಸ್ವಾಮಿಗಳು ಇವರಿಗೆ ದಶೋಪನಿಷತ್ತುಗಳನ್ನು ಹೇಳಿದರು. ಈ ಕಾಲಕ್ಕೆ ಶಾಸ್ತ್ರಿಗಳವರಿಗೆ ಉಪಾಧಿಗಳು ಬಹಳ ಗಂಟು ಬಿದ್ದಂತಾಗಿದ್ದವು. ಅಗ್ನಿಹೋತ್ರದ ನೆವದಿಂದ ಅಗ್ನ್ಯುಪಾಸನೆಯು ಇವರಿಗೆ ಒಂದನೇ ಉಪಾಧಿಯಾಗಿತ್ತು; ಶ್ರೀದತ್ತೋಪಾಸನೆಯು ಎರಡನೇದು; ಇವುಗಳ ಹೊರತು ಅತಿಥಿ ಸೇವೆಯು ಇವರ ಪ್ರಾಮುಖ್ಯ ಕೆಲಸವಾಗಿತ್ತು. ಇಷ್ಟೆಲ್ಲ ಕೆಲಸಗಳನ್ನು ಮುಗಿಸಿಕೊಂಡು ಶಾಸ್ತ್ರಿಗಳವರು ಗೋವಿಂದ ಸ್ವಾಮಿಗಳ ಬಳಿಯಲ್ಲಿ ಉಪನಿಷತ್ತುಗಳ ಪರಿಶ್ರಮ ಮಾಡಬೇಕಾಗುತ್ತಿತ್ತು. ಇವುಗಳ ಹೊರತು ಯೋಗಾಭ್ಯಾಸವನ್ನು ಸಹ ಇವರು ತಮ್ಮ ನಿತ್ಯಕ್ರಮದಲ್ಲಿ ಸೇರಿಸಿದ್ದರು. ಮಾಣಗಾವದಲ್ಲಿದ್ದಾಗ ಇವರಿಗೆ ಯೋಗಶಾಸ್ತ್ರದ ರಹಸ್ಯವು ತಿಳಿಯದಾಗಲು, ಶ್ರೀದತ್ತಭಗವಾನನು ಕಾಪಸೀ ಮೋಜಣೀದಾರನ ಕಡೆಗೆ ಹೋಗಲು ಇವರಿಗೆ ಸೂಚಿಸಿದನು. ಆಜ್ಞೆಗೆ ಸರಿಯಾಗಿ ಶಾಸ್ತ್ರಿಗಳವರು ಕಾಪಶಿಗೆ ಹೋಗಿ ಮೋಜಣೀದಾರನನ್ನು ಕಾಣಲು, ಆತನು ಇವರಿಗೆ ಯೋಗಶಾಸ್ತ್ರದ ರಹಸ್ಯವುಳ್ಳ ಒಂದು ಹಿಂದುಸ್ತಾನೀ ಭಾಷೆಯ ಪುಸ್ತಕವನ್ನು ಕೊಟ್ಟನು. ಶಾಸ್ತ್ರಿಗಳವರು ಹಿಂದುಸ್ತಾನೀ ಭಾಷೆಯನ್ನು

ಅರಿಯದವರಾಗಿದ್ದರು; ಆದರೂ ಅವರು ಕಷ್ಟಬಟ್ಟು ಆ ಭಾಷೆಯ ಅಭ್ಯಾಸ ಮಾಡಿ ಆ ಪುಸ್ತಕದಲ್ಲಿದ್ದಂತೆ ಯೋಗಸಾಧನವನ್ನು ಮಾಡತೊಡಗಿದರು.

ಶಾಸ್ತ್ರಿಗಳಲ್ಲಿರುವ ಸದ್ವೃತ್ತಿಯಿಂದ ವಾಡಿಯಲ್ಲಿರುವ ಎಷ್ಟೋ ಜನರಿಗೆ ಕಲ್ಯಾಣವಾಯಿತು. ನಾರಾಯಣನೆಂಬ ಒಬ್ಬ ದೀಕ್ಷಿತರ ಹುಡುಗನು ಬಹು ಉಡಾಳನಿದ್ದನು. ಅವನು ಅಲ್ಪ ಸ್ವಲ್ಪ ಇಂಗ್ಲಿಷವನ್ನು ಕಲಿತಂತೆ ಮಾಡಿ, ಶಾಲೆಯನ್ನು ಬಿಟ್ಟು ಧರ್ಮಲಂಡನಾಗಿ ತಿರುಗುತ್ತಿದ್ದನು. ಅವನು ಶಾಸ್ತ್ರಿಗಳ ಯಥಾಶಾಸ್ತ್ರವಾದ ಆಚರಣೆಯನ್ನು ನೋಡಿ ನಾಚಿಕೊಂಡನು. ಅವನ ಸ್ವಭಾವದಲ್ಲಿ ತತ್ಕಾಲಕ್ಕೇ ಕ್ರಾಂತಿಯುಂಟಾಗಿ, ಬ್ರಾಹ್ಮಣಧರ್ಮದಂತೆ ನಾನೂ ನಡೆಯಬೇಕೆಂಬ ಸದಿಚ್ಛೆಯು ಅವನಲ್ಲಿ ಹುಟ್ಟಿತು. ಆಗ ಅವನು ಅದೇ ಊರಲ್ಲಿದ್ದ ಕೃಷ್ಣಶಾಸ್ತ್ರಿಗಳೆಂಬವರ ಬಳಿಯಲ್ಲಿ ಸ್ವಲ್ಪ ಅಧ್ಯಯನ ಮಾಡಿದನು. ಮುಂದೆ ಕೃಷ್ಣಶಾಸ್ತ್ರಿಗಳು ಅವನನ್ನು ನಮ್ಮ ವಾಸದೇವ ಶಾಸ್ತ್ರಿಗಳ ಕಡೆಗೆ ಕಳಿಸಿಕೊಟ್ಟರು. ಶಾಸ್ತ್ರಿಗಳವರು ನಾರಾಯಣನ ಸ್ವಬಾವದಲ್ಲಿ ಇಷ್ಟು ಬದಲಾವಣೆಯಾದದ್ದನ್ನು ನೋಡಿ, ಬಹು ಸಂತೋಷಬಟ್ಟರು; ಮತ್ತು ಅವನನ್ನು ತಮ್ಮ ಬಳಿಯಲ್ಲಿಟ್ಟುಕೊಂಡು ಸರ್ವ ಬ್ರಹ್ಮಕರ್ಮಗಳ ರಹಸ್ಯವನ್ನು ಅವನಿಗೆ ತಿಳಿಸಿದರು. ಜ್ಯೋತಿಷ್ಯವನ್ನೂ ಹೇಳಿದರು. ಅವನ ಕಡೆಯಿಂದ ಸ್ಮಾರ್ತಾಗ್ನಿಯನ್ನು ಇಡಿಸಿ, ಅವನನ್ನು ಒಳ್ಳೇ ಕರ್ಮಠನನ್ನಾಗಿ ಮಾಡಿದರು. ಈ ಮೇರೆಗೆ ನಾರಾಯಣನು ನಾರಾಯಣದೀಕ್ಷಿತನಾಗಿ ಜನರಿಂದ ಮನ್ನಣೆಯನ್ನು ಹೊಂದಹತ್ತಿದನು.

ಶ್ರೀಮತ್ಪರಮಹಂಸ ಗೋವಿಂದ ಸ್ವಾಮಿಗಳಲ್ಲಿ ಶಾಸ್ತ್ರಿಗಳವರು ಗುರುಭಾವನೆಯನ್ನು ವಹಿಸಿದ್ದರೆಂದು ಮೇಲೆ ಹೇಳಿದೆಯಷ್ಟೇ? ಸ್ವಾಮಿಗಳವರು ಬ್ರಹ್ಮೀಭೂತರಾಗಲು, ಶಿಷ್ಯಧರ್ಮದಂತೆ ಮುಂದಿನ ಅವರ ಎಲ್ಲ ಕೆಲಸಗಳನ್ನು ಶಾಸ್ತ್ರಿಗಳವರೇ ಮಾಡಿದರು. ಗೋವಿಂದ ಸ್ವಾಮಿಗಳು ದೇಹವಿಟ್ಟ ಬಳಿಕ ಶಾಸ್ತ್ರಿಗಳಿಗೆ ವಾಡಿಯನ್ನು ಬಿಟ್ಟು ಉತ್ತರ ಪ್ರಾಂತಕ್ಕೆ ಹೋಗಲು ಶ್ರೀ ದತ್ತಾತ್ರಯನ ಅಪ್ಪಣೆಯಾಯಿತು. ಈ ಸಂಗತಿಯನ್ನು ಶಾಸ್ತ್ರಿಗಳವರು ತಮ್ಮ ಸ್ನೇಹಿತರ ಮುಂದೆ ಹೇಳಿದರು.

'ಮೂರು ಕಿವಿ ಕೇಳಿದ್ದು, ಮೂರು ಲೋಕ ಕೇಳಿತೆ''ಂಬಂತೆ ಶಾಸ್ತ್ರಗಳವರು ವಾಡಿಯನ್ನು ಬಿಟ್ಟು ಹೋಗುವರೆಂಬ ಸುದ್ದಿಯು ಕ್ಷಣಮಾತ್ರದಲ್ಲಿ ಊರನ್ನೆಲ್ಲ ವ್ಯಾಪಿಸಿಬಿಟ್ಟಿತು ಸಜ್ಜನರು ಯಾರಿಗೆ ಬೇಡ? ಅದರಲ್ಲಿಯೂ ಪರೋಪಕಾರಿಗಳಾದ ನಮ್ಮ ವಾಸುದೇವ ಶಾಸ್ತ್ರಿಗಳಂಥ ಸಜ್ಜನರು ದುರ್ಜನರಿಗೆ ಸಹ ಪ್ರಿಯರಾಗುವರು. ಶಾಸ್ತ್ರಿಗಳ ವಿಯೋಗವಾಗುತ್ತದೆಂದು ತಿಳಿದು, ವಾಡಿಯ ಜನರು ಬಹುಪರಿಯಾಗಿ ಚಡಪಡಿಸಿದರು. ಮೌನೀ ಮಹಾರಾಜರ ಮೇಲೆ ಶಾಸ್ತ್ರಿಗಳವರ ಭಕ್ತಿಯು ವಿಶೇಷವಾಗಿರುವದರಿಂದ ಅವರ ಮುಖದಿಂದ ಶಾಸ್ತ್ರಿಗಳವರಿಗೆ ಹೇಳಿಸಿ ಶಾಸ್ತ್ರಿಗಳ ಪ್ರಯಾಣವನ್ನು ತಪ್ಪಿಸಬೇಕೆಂದು ಕೆಲವು ಪ್ರಮುಖ ಜನರು ಆಲೋಚಿಸಿ, ಮೌನೀಮಹಾರಾಜರ ಮುಂದೆ ಈ ಪ್ರಸ್ತಾಪವನ್ನು ತೆಗೆದರು. ಆಗ ಮಹಾರಾಜರವರು ಶಾಸ್ತ್ರಿಗಳವರನ್ನು ಕರೆಯಿಸಿದರು. ಶಾಸ್ತ್ರಿಗಳವರು ಬಹು ಭಕ್ತಿಪೂರ್ವಕವಾಗಿ ಸ್ವಾಮಿಗಳ ಮುಂದೆ ಬಂದು ನಿಂತುಕೊಳ್ಳಲು, ಸ್ವಾಮಿಗಳು ಅವರನ್ನು ಕುರಿತು—''ವಾಸುದೇವ ಶಾಸ್ತ್ರಿಗಳೇ, ನೀವು ವಾಡಿಯನ್ನು ಬಿಟ್ಟು ಬೇರೆ ಕಡೆಗೆ ಹೋಗುವಿರೆಂಬ ಸುದ್ದಿಯನ್ನು ಕೇಳಿರುತ್ತೇವೆ; ಇದು ನಿಜವೋ ಹೇಗೆ?'' ಎಂದು ಕೇಳಿದರು. ಅದಕ್ಕೆ ಶಾಸ್ತ್ರಿಗಳವರು—''ಶ್ರೀಯ ಆಜ್ಞೆಯಾಗಿರುವದರಿಂದ ಕೊಲ್ಲಾಪುರಕ್ಕೆ ಹೋಗಬೇಕಾಗಿದೆ'' ಎಂದು ಉತ್ತರ ಕೊಟ್ಟರು. ಮೌನೀಸ್ವಾಮಿಗಳು ಶಾಸ್ತ್ರಿಗಳವರಿಗೆ ಹೋಗಬೇಡಿರೆಂದು ಆಗ್ರಹ ಮಾಡದೆ, ಕೊಲ್ಲಾಪುರದಲ್ಲಿ ಬಹಳ ದಿವಸವಿರಬೇಡಿರೆಂದು ಮಾತ್ರ ಹೇಳಿದರು. ಈ ಅಪ್ಪಣೆಯಿಂದ ಶಾಸ್ತ್ರಿಗಳವರಿಗೆ ಬಹು ಆನಂದವಾಯಿತು. ಅವರು ಪ್ರಯಾಣದ ಸಿದ್ಧತೆಯನ್ನು ನಡೆಸಿದರು.

ಬಳಿಕ ಶಾಸ್ತ್ರಿಗಳವರು ತಮ್ಮ ಉಪಕರಣಗಳನ್ನೆಲ್ಲ ತಕ್ಕೊಂಡು, ಪತ್ನೀಸಮೇತರಾಗಿ ಕಾಲನಡಿಗೆಯಿಂದ ಕೊಲ್ಲಾಪುರಕ್ಕೆ ಹೊರಟರು. ಈ ಮಹಾನುಭಾವರಾದ ದಂಪತಿಗಳನ್ನು ನೋಡಿ ಬಹು ಜನರು ಆನಂದಪಟ್ಟರು. ಶ್ರೀಮಂತನಾದ ಪತಿಯನ್ನು ಪ್ರೀತಿಸಲಿಕ್ಕೂ, ಅವನ ಅನುವರ್ತನ ಮಾಡಲಿಕ್ಕೂ ಬಹು ಜನ ಹೆಂಗಸರಿಗೆ ಬರುತ್ತದೆ; ಆದರೆ ಪತಿಯ

ದಾರಿದ್ರ್ಯ ಕಾಲದಲ್ಲೂ ಪತಿಭಕ್ತಿಪರಾಯಣರಾದ ಹೆಂಗಸರು ದೊರೆಯು ವದು ಅಪರೂಪವೆಂತಲೇ ಹೇಳಬಹುದು. ನಮ್ಮ ಶಾಸ್ತ್ರಿಗಳ ಕುಟುಂಬವು ತಮ್ಮ ಪಾತಿವ್ರತ್ಯ ಪ್ರಭಾವದಿಂದ ಪುರಾಣಕಾಲದ ಹೆಂಗಸರನ್ನು ಸಹ ಮೀರುವ ಹಾಗೆ ಇದ್ದರು. ಅವರು ತಮ್ಮ ವಿರಕ್ತನೂ, ದರಿದ್ರನೂ ಆದ ಪತಿಯ ಸಂಗಡ ಮಳೆಯೊಳಗೆ-ಚಳಿಯೊಳಗೆ-ಬಿಸಿಲೊಳಗೆ ದಾರೀ ನಡೆಯುತ್ತ, ಪತಿಸೇವೆಯನ್ನು ಮಾಡುತ್ತಿದ್ದರು. ಅವರು ಪತಿಯ ಸಂಗಡ ಸಂಚಾರ ಮಾಡುವಾಗ ಅಡವಿಯೆನ್ನಲಿಲ್ಲ, ಅರಣ್ಯವೆನ್ನಲಿಲ್ಲ, ಗಿರಿ-ಗಹ್ವರಗಳೆನ್ನಲಿಲ್ಲ, ಮುಳ್ಳು-ಕಲ್ಲುಗಳೆನ್ನಲಿಲ್ಲ; ಒಂದೇಸವನೆ ಪತಿ ಸೇವಾತತ್ಪರರಾಗಿ ತಿರುಗಿದರು. ಇಂಥ ಸಾಧ್ವಿಗೆ ಧನ್ಯಳೆಂದು ಒರಿಯ ಮಾನವರೇ ಏಕೆ, ದೇವತೆಗಳೂ ಅನ್ನಬಹುದಲ್ಲವೇ? ಇಂಥ ಅವರ್ಣನೀಯಳಾದ ಹೆಂಡತಿಯೊಡನೆ ಶಾಸ್ತ್ರಿಗಳವರು ಕೊಲ್ಲಾಪುರವನ್ನು ತಲುಪಿ ಅಲ್ಲಿಯ ಶ್ರೀ ಮಹಾಲಕ್ಷ್ಮಿಯ ದರ್ಶನವನ್ನು ತಕ್ಕೊಂಡರು.

ಬಳಿಕ ಶಾಸ್ತ್ರಿಗಳವರು ಕೊಲ್ಲಾಪುರದಿಂದ ಭಿಲವಾಡಿಗೆ ಬಂದರು. ಅಲ್ಲಿ ದೇವಿಯ ದರ್ಶನವನ್ನು ಮಾಡಿಕೊಂಡು ಮುಂದೆ ಹೊರಟರು. ಈ ಪ್ರಕಾರವಾಗಿ ಪ್ರವಾಸ ಮಾಡುತ್ತ ಮಾಡುತ್ತ, ಶಾಸ್ತ್ರಿಗಳವರು ಪಂಢರಪುರಕ್ಕೆ ಬಂದರು. ಶಾಸ್ತ್ರಿಗಳವರು ಆದರದಿಂದ ಪಾಂಡುರಂಗನ ದರ್ಶನವನ್ನು ಹೊಂದಿ, ದೇವಾಲಯದ ಹೊರಗೆ ಬರಲು, ಒಬ್ಬ ಬ್ರಾಹ್ಮಣನು ಶಾಸ್ತ್ರಿಗಳವರ ಕೈಯಲ್ಲಿ ಪುಠಾಣಿಯಿಂದ ತುಂಬಿದ ಒಂದು ಪುಡಿಕೆಯನ್ನು ಪ್ರಸಾದವೆಂದು ಕೊಟ್ಟನು. ಶಾಸ್ತ್ರಿಗಳವರು ಅದನ್ನು ಬಿಚ್ಚಿ ನೋಡಿ ಹಾಗೇ ಪದರಿನಲ್ಲಿ ಕಟ್ಟಿಕೊಂಡು, ಬಿಡಾರಕ್ಕೆ ಬಂದರು. ರಾತ್ರಿಯಲ್ಲಿ ಶಾಸ್ತ್ರಿಗಳವರ ಸ್ವಪ್ನದಲ್ಲಿ ಪಾಂಡುರಂಗನು ಬಂದು—:"ನಿಮಗೆ ನಾನು ಪ್ರಸಾದವನ್ನು ಕೊಟ್ಟಿರಲು, ನೀವು ಅದನ್ನು ಭಕ್ಷಣಮಾಡಲಿಲ್ಲವೇಕೆ?" ಎಂದು ಕೇಳಿದನು ಅದಕ್ಕೆ ಶಾಸ್ತ್ರಿಗಳವರು: ಪುಠಾಣಿಯು ಪೇಟೆಯೊಳಗೆ ಹುರಿದ ಪದಾರ್ಥವಾದ್ದರಿಂದ ನಿಷೇಧವೆಂದು ಬಿಟ್ಟಿರುವೆನು, ಎಂದು ಹೇಳಲು, ಪಾಂಡುರಂಗನು ತನ್ನ ಪ್ರಸಾದವನ್ನು ತಿರುಗಿ ತಕ್ಕೊಂಡನು! ಮರುದಿನ ಶಾಸ್ತ್ರಿಗಳವರು ಎದ್ದು ನೋಡಲು, ಸೆರಗಿನಲ್ಲಿದ್ದ ಪುಠಾಣಿಯ

ಪುಡಿಕೆಯೂ ಇಲ್ಲದಂತಾಗಿತ್ತು. ಆಗ ಶಾಸ್ತ್ರಿಗಳವರು ಸಮಾಧಾನಪಟ್ಟು ಪಾಂಡುರಂಗನನ್ನು ಕುರಿತು:— ಎಲೈ ಪಾಂಡುರಂಗನೇ, ನಾನು ಇಂದಿನ ವರೆಗೆ ನಿಷೇಧ ಪದಾರ್ಥಗಳನ್ನು ತಿನ್ನಲಿಕ್ಕಿಲ್ಲವೆಂದು ಸಂಕಲ್ಪಿಸಿದ್ದಂತೆ, ಮುಂದೆಯಾದರೂ ಈ ನನ್ನ ಸಂಕಲ್ಪವು ನಿರ್ವಿಘ್ನದಿಂದ ಸಾಗುವಂತೆ ನನ್ನನ್ನು ಅನುಗ್ರಹಿಸು; ನಿನ್ನೆ ಸ್ವಪ್ನದಲ್ಲಿ ನೀನು ನನ್ನ ಸಂಕಲ್ಪಕ್ಕೆ ಅನುಕೂಲವಾಗಿ ನಡೆದದ್ದಕ್ಕೆ ನನಗೆ ಬಹಳ ಆನಂದವಾಗಿರುತ್ತದೆ; ಎಂದು ಸ್ತೋತ್ರ ಮಾಡಿದರು!

ಅನಂತರ ಶಾಸ್ತ್ರಿಗಳವರು ಪಂಢರಪುರವನ್ನು ಬಿಟ್ಟು ದಾರಿಯಲ್ಲಿ ಹತ್ತಿರವ ತೀರ್ಥಗಳಲ್ಲಿ ಸ್ನಾನಮಾಡುತ್ತ ಗೋದಾವರೀ ತೀರಕ್ಕೆ ಬಂದರು. ಅವರು ಗಂಗಾಖೇಡವೆಂಬ ಹಳ್ಳಿಯಲ್ಲಿ ವಾಸಮಾಡಿದರು. ಗಂಗಾಖೇಡವು ಶಾಸ್ತ್ರಿಗಳವರಿಗೆ ಪ್ರಶಸ್ತವಾಗಿ ಕಂಡುಬಂದದರಿಂದ, ಅಲ್ಲಿ ಅವರು ಬಹಳ ದಿವಸ ತಳವೂರಿದರು. ಶಾಸ್ತ್ರಿಗಳವರು ದಿನಾಲು ಗೋದಾವರಿಯಲ್ಲಿ ಸ್ನಾನಮಾಡಿ ಅನುಷ್ಠಾನ ಮಾಡುತ್ತಿದ್ದರು. ಊರಲ್ಲಿ ಶುಕ್ಲ ಭಿಕ್ಷೆಯನ್ನು ಬೇಡಿಕೊಂಡು ಬಂದು ಉದರನಿರ್ವಾಹವನ್ನು ಸಾಗಿಸುತ್ತಿದ್ದರು. ಹೀಗಿರುತ್ತಿರಲು, ಅನ್ನಪೂರ್ಣಾಬಾಯಿಯವರಿಗೆ ಒಂದು ದಿವಸ ಜ್ವರ ಬಂದವು. ಎರಡು ಮೂರು ಸಾರೆ ವಾಂತಿಭ್ರಾಂತಿಯಾಯಿತು. ಶಾಸ್ತ್ರಿಗಳವರು ಔಷಧೋಪಚಾರ ಮಾಡಿದರು. ಅದರಿಂದ ಆ ಸಾಧ್ವಿಗೆ ಗುಣಬರಲಿಲ್ಲ. ಒಂದು ದಿನ ಆ ಪತಿನಿಷ್ಠಳು ಪತಿಯನ್ನು ಕುರಿತು:— "ಪ್ರಾಣನಾಥ! ನಾನು ತಮ್ಮ ಪಾಣಿಗ್ರಹಣಮಾಡಿ ಇಷ್ಟು ದಿವಸ ತಮ್ಮ ಚರಣಸೇವೆಯಿಂದ ಧನ್ಯಳಾದೆನು. ಈ ದಿನ ನನಗೆ ಯಾಕೋ ಒಂದು ತರವಾಗಿ ಕಾಣುತ್ತದೆ. ತಮ್ಮ ಸಮಾಗಮ ಸುಖವು ತಪ್ಪುವಂತೆ ಕಾಣುತ್ತದೆ! ನಾನು ಮರಣಕ್ಕೆ ಅಂಜುತ್ತೇನಂತಲ್ಲ! ತಮ್ಮ ಚರಣದರ್ಶನ ಲಾಭವು ಇಂದಿಗೇ ತಪ್ಪುತ್ತದೆಂದು ಚಡಪಡಿಸುತ್ತೇನೆ; ಆದರೂ ಪತಿವ್ರತೆಯರಿಗೆ ಪತಿಯ ಮುಂದೆ ಮರಣ ಹೊಂದುವದೇ ಪರಮಭೂಷಣವಾದ್ದರಿಂದ, ನಾನು ಧನ್ಯಳೆಂದು ತಿಳಿಯುತ್ತೇನೆ" ಇಷ್ಟು ಮಾತು ಆಡುವಷ್ಟರಲ್ಲಿ ಆ ಸಾಧ್ವಿಯ ವಾಣಿಯು ಕುಂಠಿತವಾಗಹತ್ತಿತು. ಈ ಲಕ್ಷಣದಿಂದ

ಹೆಂಡತಿಯು ಸ್ವಲ್ಪ ಹೊತ್ತಿನಲ್ಲಿಯೇ ಇಹಲೋಕದ ಯಾತ್ರೆಯನ್ನು ಮುಗಿಸುವಳೆಂದು ಶಾಸ್ತ್ರಿಗಳವರು ನಿಶ್ಚಯಿಸಿದರು.

ಆಗ ಶಾಸ್ತ್ರಿಗಳವರು ಲಗುಬಗೆಯಿಂದ ನದಿಗೆ ಹೋಗಿ ಸ್ನಾನ ಮಾಡಿ ಶುದ್ಧವಾದ ಗಂಗೋದಕವನ್ನು ತಕ್ಕೊಂಡು ಬಂದರು. ಹೆಂಡತಿಯನ್ನು ಎಬ್ಬಿಸಿ ಕೂಡ್ರಿಸಿ ಗಂಗೋದಕದಿಂದ ಸ್ನಾನ ಮಾಡಿಸಿದರು. ಬಳಿಕ ಅವರು ಗೋಮಯದಿಂದ ಪರಿಶುದ್ಧವಾಗ ಮಾಡಿದ ಸ್ಥಳದ ಹೆಂಡತಿಯನ್ನು ಕುಳ್ಳಿರಿಸಿ, ಒಗೆದ ಬಟ್ಟೆಯನ್ನು ಉಡಿಸಿದರು; ಮತ್ತು ಅರಸಿನ-ಕುಂಕುಮಗಳನ್ನು ಹಚ್ಚಿದರು. ಬ್ರಾಹ್ಮಣ ಸುವಾಸಿನಿಯರನ್ನು ಕರೆಯಿಸಿ, ಅವರಿಗೆ ಹೆಂಡತಿಯ ಕಡೆಯಿಂದ ಅಲಂಕಾರಗಳನ್ನು ದಾನವಾಗಿ ಕೊಡಿಸಿದರು; ಹಾಗು ಶಾಸ್ತ್ರೋಕ್ತವಾದ ಬಾಗಿಣವನ್ನು ಕೊಡಿಸಿದರು. ಹೆಂಡತಿಯು ಸಾಯುವಳೆಂಬ ಚಿಂತೆಯನ್ನು ಶಾಸ್ತ್ರಿಗಳವರು ಎಳ್ಳಷ್ಟೂ ಮಾಡಲಿಲ್ಲ. ಅಯ್ಯೋ ಸಾಯುವೆನೆಂದು ಆ ಪರಮ ಸಾಧ್ವಿಯೂ ಚಿಂತಿಸಲಿಲ್ಲ. ಆಕೆಯು ತವರುಮನೆಗೆ ಹೋಗುವ ಹೆಣ್ಣುಮಗಳಂತೆ ಸಂಭ್ರಮದಿಂದ, ಪತಿಯು ಹೇಳಿದ ಎಲ್ಲ ಕೆಲಸಗಳನ್ನೂ ಮಾಡಿದಳು. ಇಷ್ಟೆಲ್ಲ ವಿಧಾನಗಳು ಆಗುವಷ್ಟರಲ್ಲಿ ಆ ಸಾಧ್ವಿಯ ಪ್ರಾಣೋತ್ಕ್ರಮಣದ ಸಮಯವು ಅತಿ ಸಮೀಪಿಸಿತು. ಆಗ ಆ ಸಾಧ್ವಿಗೆ ಕಂಪನವು ಹುಟ್ಟಿತು. ಆಕೆಯು ಪತಿಚರಣದಲ್ಲಿ ಮಸ್ತಕವನ್ನಿಟ್ಟು ಪತಿಧ್ಯಾನ ಮಾಡಿ "ಹರಹರ! ಶ್ರೀಗುರುದೇವ ದತ್ತ!" ಎಂದು ನುಡಿಯಲು, ಆ ಸಾಧ್ವಿಯ ಪ್ರಾಣವು ಹೊರಟು ಹೋಗಿ, ಜಡ ಶರೀರವು ಪತಿಯ ಚರಣದ ಮೇಲೆ ದೀರ್ಘನಿದ್ರಾಸಕ್ತವಾಯಿತು! ಹರ! ಹರ!! ಆ ಸಾಧ್ವಿಯು ಎಷ್ಟು ಧನ್ಯಳು!!! ಮರಣಪರ್ಯಂತವಾಗಿ ಏಕನಿಷ್ಠೆಯಿಂದ ಪತಿಸೇವೆಯನ್ನು ಮಾಡಿದ ಆ ಸಾಧ್ವಿಯು ಧನ್ಯಳಲ್ಲವೆ? ಆ ಪುಣ್ಯವಂತಳು ಪರಲೋಕಕ್ಕೆ ತೆರಳಿದಾಗ ಶಾಲಿವಾಹನ ಶಕೆಯ ೧೮೧೨ನೇ ವೈಶಾಖ ಶುದ್ಧ ಚತುರ್ದಶಿಯ ಪುಣ್ಯತಿಥಿಯು ಇತ್ತು.

ಬಳಿಕ ಶಾಸ್ತ್ರಿಗಳವರು ಶವಸಂಸ್ಕಾರವನ್ನು ಮಾಡಿ, ಔರ್ಧ್ವದೇಹಿಕ ಕರ್ಮಗಳನ್ನು ವಿಧಾನೋಕ್ತವಾಗಿ ಆಚರಿಸಿದರು. ಶಾಸ್ತ್ರಿಗಳವರು

ಹೆಂಡತಿಯು ಇದ್ದಾಗ ಆಕೆಯೊಡನೆ ಒಳ್ಳೇ ಪ್ರೇಮದಿಂದ ನಡಕೊಳ್ಳು ತ್ತಿದ್ದ ಮಾನದಿಂದ, ಈಗ ಹೆಂಡತಿಯು ಮರಣದಿಂದ ನಿಶ್ಚಿಂತರಾದರು. ನಿಜವಾದ ವಿರಕ್ತಿಯೆಂದು ಇದಕ್ಕೇ ಅನ್ನಬಹುದು. ಈಗಿನ ಕಾಲದ ಮರುಳ ವೇದಾಂತಿಗಳಂತೆ ಶಾಸ್ತ್ರಿಗಳವರು ಹೆಂಡತಿಯನ್ನು ಎಂದೂ ತಿರ ಸ್ಕರಿಸಲಿಲ್ಲ. ಅವರು ಹೆಂಡತಿಯಿಂದಲೇ ಅತ್ಯಂತ ಶ್ಲಾಘ್ಯವಾದ ಧರ್ಮ ವನ್ನು ಸಾಧಿಸಿಕೊಂಡು, ಆ ಸಾಧ್ವಿಗೂ ಪುಣ್ಯವನ್ನು ಒದಗಿಸಿಕೊಟ್ಟು, ಈಶ್ವರೇಚ್ಛೆಯಿಂದ ಹೆಂಡತಿಯು ವಿಯೋಗವಾಗುವ ಪ್ರಸಂಗ ಬಂದಲ್ಲಿ ನಿಶ್ಚಿಂತರಾದರು. ತಮ್ಮ ವೇದಾಂತ ಮಾರ್ಗಕ್ಕೆ ಹೆಂಡತಿಯು ವಿಘ್ನ ಕಾರಿಯೆಂದು ತಿಳಿಯುವ ಗಂಡಸರು, ನಮ್ಮ ಶಾಸ್ತ್ರಿಗಳವರ ಆಚರಣೆಯ ರಹಸ್ಯವನ್ನು ವಿಚಾರಿಸಿಕೊಳ್ಳಬೇಕೆಂದು ವಿನಯದಿಂದ ಸೂಚಿಸುವೆವು. ಹೆಂಡತಿಯು ಮರಣದಿಂದ ಶಾಸ್ತ್ರಿಗಳವರು ಸ್ವತಂತ್ರರಾದರು. ಇನ್ನು ತಮ್ಮ ಕೊರಳಿಗೆ ಯಾವ ಉರುಲೂ ಇಲ್ಲವೆಂದು ಅವರು ಸಂನ್ಯಾಸಗ್ರಹಣ ಮಾಡುವದನ್ನು ನಿಶ್ಚಯಿಸಿದರು. ಅವರ ನಿಶ್ಚಯಕ್ಕೆ ಅನುಕೂಲವಾಗಿ ಗಂಗಾಖೇಡದ ಭಕ್ತಜನರು ಎಲ್ಲ ರೀತಿಯಿಂದ ಸಹಾಯ ಮಾಡಿದರು. ಹೆಂಡತಿಯು ಸತ್ತ ಹದಿಮೂರನೆಯ ದಿವಸವೇ ಶಾಸ್ತ್ರಿಗಳವರು ಚತುರ್ಥಾ ಶ್ರಮವನ್ನು ಸ್ವೀಕರಿಸಿ, ವಿಲಕ್ಷಣವಾದ ತೇಜಸ್ಸಿನಿಂದ ಒಪ್ಪುತ್ತಿದ್ದರು. ಶ್ರೀದತ್ತಾತ್ರಯನಿಂದಲೇ ಶಾಸ್ತ್ರಿಗಳವರ ಪ್ರೇಷೋಚ್ಚಾರದ ವಿಧಾನವು ನೆರವೇರಿಸಲ್ಪಟ್ಟಿತಂತೆ! ಈ ಚತುರ್ಥಾಶ್ರಮದಲ್ಲಿ ಶಾಸ್ತ್ರಿಗಳವರಿಗೆ- **ವಾಸುದೇವಾನಂದ ಸರಸ್ವತೀ** ಎಂಬ ಹೆಸರು ಪ್ರಾಪ್ತವಾಯಿತು. ಜನರು ಇವರಿಗೆ **ಮಹಾರಾಜ**ರೆಂದು ಕರೆಯುಹತ್ತಿದರು.

---

## ಧರ್ಮಸಂರಕ್ಷಣ.

ಈ ಮೇರೆಗೆ ವಾಸುದೇವ ಶಾಸ್ತ್ರಿಗಳು ಪತ್ನೀವಿಯೋಗವಾದ ಹದಿ ಮೂರನೆಯ ದಿವಸವೇ ಸಂನ್ಯಾಸವನ್ನು ಗ್ರಹಣ ಮಾಡಿ, ತಮ್ಮ ಪ್ರಖರ ವಾದ ವೈರಾಗ್ಯವೃತ್ತಿಯನ್ನು ಜನರ ನಿದರ್ಶನಕ್ಕೆ ತಂದು ಕೊಟ್ಟರು.

ಬಳಿಕ ಅವರು ಗಂಗಾಖೇಡದಲ್ಲಿ ಎಂಟು ದಿವಸಗಳ ವರೆಗೆ ಇದ್ದರು. ಚತುರ್ಥಾಶ್ರಮದ ವಿಧಾನಗಳಾದ ಪ್ರೇಷೋಚ್ಚಾರ, ದಂಡಧಾರಣಗಳಲ್ಲಿ ಮೊದಲನೇದು ಗಂಗಾಖೇಡದಲ್ಲಿಯೇ ಆಗಿದ್ದು, ದಂಡಧಾರಣವು ಮಾತ್ರ ಆಗಿದ್ದಿಲ್ಲ. ಆದಕ್ಕಾಗಿ ಅವರು ಉಜ್ಜಯಿನಿಗೆ ಹೋದರು. ಅಲ್ಲಿ 'ಗುರುಸ್ವಾಮಿ' ಎಂಬವರೊಬ್ಬ ಸುಪ್ರಸಿದ್ಧರಾದ ಸಂನ್ಯಾಸಿಗಳಿದ್ದರು. ಆ ಸ್ವಾಮಿಗಳಿಂದಲೇ ನಮ್ಮ ಚರಿತ್ರನಾಯಕರ ದಂಡಧಾರಣ ವಿಧಿಯು ನೆರವೇರಿಸಲ್ಪಟ್ಟಿತು. ಮಹಾರಾಜರವರು ಆ ವರ್ಷದ ಚಾತುರ್ಮಾಸ್ಯ ವನ್ನು ಉಜ್ಜಯಿನಿಯಲ್ಲಿಯೇ ಕಳೆದರು. ಯಥಾಶಾಸ್ತ್ರವಾಗಿ ಪರಿಪಾಲಿಸ ಲ್ಪಡುವ ಸಂನ್ಯಾಸ ಧರ್ಮದಿಂದ ನಮ್ಮ ವಾಸುದೇವಾನಂದ ಸರಸ್ವತೀ ಮಹಾರಾಜರಲ್ಲಿ ಉಜ್ಜಯಿನೀ ನಿವಾಸಿಗಳ ಭಕ್ತಿ-ವಿಶ್ವಾಸಗಳು ಬಹಳ ಬೆಳೆದವು. ಮಹಾರಾಜರವರ ಪ್ರಖರವಾದ ಸಾಮರ್ಥ್ಯವು ಜನರ ಮನ ಸ್ಸನ್ನು ಆಕರ್ಷಿಸಿಕೊಂಡಿತು. ಈ ಮೇರೆಗೆ ಮಹಾರಾಜರವರು ಜನರ ಚಿತ್ತವನ್ನು ಹರಣಮಾಡುತ್ತಿರಲು, ಭಗವಾನ್ ಶ್ರೀದತ್ತಾತ್ರಯನು ಅವರ ಸ್ವಪ್ನದಲ್ಲಿ ಬಂದು ಹೇಳಿದ್ದೇನಂದರೆ:—"ಪಾಪಮಯವಾದ ಈಗಿನ ಕಾಲದಲ್ಲಿ ಜನರು ಧರ್ಮಲಂಡರಾಗಿರುವರು. ಅನೀಶ್ವರವಾದವು ಹೆಚ್ಚು ತ್ತಿರುವದು. ಆದ್ದರಿಂದ ನೀವು ಶಕ್ಯವಿದ್ದಮಟ್ಟಿಗೆ ಕರ್ಮಭ್ರಷ್ಟರಾಗುವ ಜನರನ್ನು ಸದುಪದೇಶದಿಂದ ಹಾದಿಗೆ ತರಬೇಕು. ಧರ್ಮಜಾಗ್ರತೆ ಯುನ್ನುಂಟು ಮಾಡಬೇಕು. ದೇಶವನ್ನು ಸಂಚರಿಸಬೇಕು" ಇತ್ಯಾದಿ.

ಈ ಪ್ರಕಾರವಾಗಿ ಶ್ರೀ ಆತ್ರೇಯನು ಆಜ್ಞಾಪಿಸಿದ್ದನ್ನು ಅರಿತು ಮಹಾರಾಜರವರಿಗೆ ಬಹು ಸಂತೋಷವಾಯಿತು. ಮನಸ್ಸಿನಲ್ಲಿದ್ದಂತೆ ಭಗವಂತನ ಅಪ್ಪಣೆಯಾಗಲು, ಮಹಾರಾಜರವರು ಕಾಲವಿಲಂಬ ಮಾಡದೆ ಜನರಿಗೆ ಕರ್ಮಮಾರ್ಗವನ್ನು ಬೋಧಿಸಹತ್ತಿದರು. ಶ್ರುತಿ-ಸ್ಮೃತಿಗಳ ಆಧಾರದಿಂದ ಸರ್ವೋತ್ಕೃಷ್ಟವಾಗಿ ವೈದಿಕ ಧರ್ಮ-ಕರ್ಮಗಳ ರಹಸ್ಯ ವನ್ನು ಹೇಳುವಾಗ ಅವರ ಆನಂದಬಾಷ್ಪಗಳು ಉದುರುತ್ತಿದ್ದವು. ಅವರ ದಿವ್ಯವಾಣಿಯಿಂದ ಉಜ್ಜಯಿನಿಯ ಜನರು ಒಳ್ಳೇ ಧಾರ್ಮಿಕರಾದರು. ಬಳಿಕ ಮಹಾರಾಜರವರು ಉಜ್ಜಯಿನಿಯಿಂದ ಪ್ರಯಾಣ ಬೆಳೆಸಿದರು.

ಈ ಕಾಲಕ್ಕೆ ಅವರಲ್ಲಿ ಎರಡು ಕಾವೀಶಾಟಿಗಳು, ದಂಡ-ಕಮಂಡಲುಗಳು, ೧-೨ ಪುಸ್ತಕಗಳು, ಶ್ರೀ ದತ್ತಾತ್ರಯನ ೨ ಮೂರ್ತಿಗಳು ಮಾತ್ರ ಇದ್ದವು. ಇವುಗಳ ಹೊರತು ಹೆಚ್ಚಿನ ಸಾಮಾನುಗಳಾವವೂ ಇದ್ದಿಲ್ಲ. ಪ್ರವಾಸದಲ್ಲಿ ಮಹಾರಾಜರವರಿಗೆ ಉಪೋಷಣ ಮಾಡುವ ಪ್ರಸಂಗಗಳು ಮೇಲಿಂದ ಮೇಲೆ ಬರುತ್ತಿದ್ದವು. ಯಾಕಂದರೆ, ದಕ್ಷಿಣ ದೇಶದ ಬ್ರಾಹ್ಮಣರಲ್ಲಲ್ಲದೆ ಅನ್ಯರಲ್ಲಿ ಅವರು ಭಿಕ್ಷೆಗೆ ಹೋಗುತ್ತಿರಲಿಲ್ಲ. ಈ ಮೇರೆಗೆ ಪಯಣದ ಮೇಲೆ ಪಯಣವನ್ನು ಮಾಡುತ್ತ, ಅವರು ಬ್ರಹ್ಮಾವರ್ತಕ್ಕೆ ಒಂದು ಮುಟ್ಟಿದರು. ಬ್ರಹ್ಮಾವರ್ತದಲ್ಲಿ 'ಅಂತಾಜೆಪಂತರ ಘಾಟಿ'ನಲ್ಲಿ ಪ್ರಶಸ್ತವಾದ ಒಂದು ರಾಮದೇವರ ಗುಡಿಯಿರುತ್ತದೆ. ಆ ಗುಡಿಯ ಬಳಿಯಲ್ಲಿಯ ಒಂದು ಗುಡಸಲಿನಲ್ಲಿ ಮಹಾರಾಜರವರು ವಾಸ ಮಾಡಿದರು. ಅವರು ಬೆಳಗಿನ ೪ ಗಂಟೆಗೆ ಎದ್ದು ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಸ್ನಾನ ಮಾಡಿ ಪ್ರಾತರನುಷ್ಠಾನವನ್ನು ಮುಗಿಸುತ್ತಿದ್ದರು. ಅನಂತರ ಅವರು ಮಾಧ್ಯಾಹ್ನದ ವರೆಗೆ ಬಾಗಿಲವನ್ನು ಹಾಕಿಕೊಂಡು ಸಮಾಧಿಯ ಏರಿಸುತ್ತಿದ್ದರು. ಸೂರ್ಯನು ನೆಟ್ಟಗೆ ಬರಲು, ಅವರು ಸಮಾಧಿಯನ್ನು ಇಳಿಸಿ ಸ್ನಾನಮಾಡಿ, ಮಾಧ್ಯಾಹ್ನ ಕಾಲದ ಅನುಷ್ಠಾನವನ್ನು ಮಾಡುತ್ತಿದ್ದರು. ಬಳಿಕ ಮೂರೇ ಮನೆಗಳಿಗೆ ಮಧುಕರಿಯ ಬಿಕ್ಷೆಗೆ ಹೋಗಿ ಬರುತ್ತಿದ್ದರು. ಭಿಕ್ಷೆಯು ಆಗುವವರೆಗೆ ಮಾತ್ರ ಪರ್ಣಕುಟೀರದ ಬಾಗಿಲವು ತೆರೆಯುತ್ತಿತ್ತು. ಭಿಕ್ಷೆಯು ಆಗುವದೊಂದೇ ತಡ, ಅವರು ಪುನಃ ಬಾಗಿಲವನ್ನು ಹಾಕಿಕೊಂಡು ಯೋಗಾನಂದದಲ್ಲಿ ಮಗ್ನರಾಗುತ್ತಿದ್ದರು.

ಈ ರೀತಿಯಾಗಿ ಮಹಾರಾಜರವರು ಬ್ರಹ್ಮಾವರ್ತದಲ್ಲಿ ಎಂಟು ತಿಂಗಳು ಕಾಲಕಳೆದರು. ಯಾರಿಗೂ ಮಹಾರಾಜರವರ ಯೋಗ್ಯತೆಯ ಪರೀಕ್ಷೆಯಾಗಲಿಲ್ಲ. ಒಂದು ದಿನ ರಾಮದೇವರ ಗುಡಿಯಲ್ಲಿ ಭಾಗವತ ಪುರಾಣವು ಪ್ರಾರಂಭಿಸಲ್ಪಟ್ಟಿತು. ಪುರಾಣಿಕನು ತಂಬೂರಿಯ ಸುನಾದದೊಂದಿಗೆ ಉಚ್ಚಸ್ವರದಿಂದ ಪುರಾಣದ ಮಂಗಲಾಚರಣವನ್ನು ಮಾಡಲು, ಮಹಾರಾಜರವರು ಆ ದನಿಯನ್ನು ಕೇಳಿ ಪುರಾಣಶ್ರವಣಕ್ಕೆ ಬಂದು

ಕುಳಿತರು. ಮಹಾರಾಜರ ಅಧಿಕಾರವು ಪೌರಾಣಿಕ ಶಾಸ್ತ್ರಿಗಳವರಿಗೆ ಹ್ಯಾಗೆ ಗೊತ್ತಾಗಬೇಕು? ಅವರು ತಾವು ಹೇಳುವಂತೆ ಲೋಕರಂಜನದ ಕಡೆಗೆ ಲಕ್ಷ್ಯಗೊಟ್ಟು ಪುರಾಣವನ್ನು ಹೇಳಹತ್ತಿದ್ದರು. ಒಂದು ದಿನವಾಯಿತು, ಎರಡು ದಿನಗಳಾದವು; ಮೂರನೆಯ ದಿವಸ ಮಹಾರಾಜರವರು ಬಹು ವಿನಯದಿಂದ ಪುರಾಣಿಕರಿಗೆ:—ಸ್ವಾಮಿಾ, ನಾಳಿಗೆ ತಮ್ಮ ಪುರಾಣವು ಮುಗಿದ ಬಳಿಕ ನಾನು ಒಂದು ಶ್ಲೋಕವನ್ನು ಹೇಳಬೇಕೆಂದು ಆಶಿಸುತ್ತೇನೆ, ಎಂದು ಹೇಳಿದರು. ಅದಕ್ಕೆ ಪುರಾಣಿಕರು: 'ಅವಶ್ಯವಾಗಿ ಆಗಲೆ'ಂದು ಅಭಯುವನ್ನಿತ್ತರು.

ಮರುದಿವಸ ಶಾಸ್ತ್ರಿಗಳವರ ಪುರಾಣವು ಮುಗಿಯಲು, ಮಹಾರಾಜರವರು ವ್ಯಾಸಪೀಠದ ಮೇಲೆ ಬಂದು ಕುಳಿತರು. ತೇಜೋವಿಶೇಷದಿಂದ ಪ್ರತಿ ವ್ಯಾಸರಂತೆ ತೋರುವ ಮಹಾರಾಜರನ್ನು ನೋಡಿ ಶ್ರೋತೃಸಮುದಾಯವು ಸದ್ದಿಲ್ಲದೆ ಕುಳಿತುಕೊಂಡಿತು. ಆಗ ಮಹಾರಾಜರವರು ಗುರುಸ್ತವನವನ್ನು ಮಾಡಿ, ಭಾಗವತದೊಳಗಿನ ಒಂದು ಶ್ಲೋಕವನ್ನು ಅಂದು, ಅದರ ಅರ್ಥವನ್ನು ಹೇಳಲಿಕ್ಕೆ ಉಪಕ್ರಮಿಸಿದರು. ಉಪನಿಷತ್ತುಗಳ ಹಾಗು ಶಾಂಕರಭಾಷ್ಯಾದಿಗಳ ಆಧಾರಗಳನ್ನು ತಕ್ಕೊಂಡು ಒಂದೇ ಶ್ಲೋಕವನ್ನು ಒಂದು ತಾಸಿನ ವರೆಗೆ ಹೇಳಿದರು. ಮಹಾರಾಜರವರ ವಿದ್ವತ್ತೆಯನ್ನೂ, ಅವರ ಪ್ರಾಸಾದಿಕ ವಾಣಿಯನ್ನೂ, ವಿಷಯನಿರೂಪಣೆಯ ಜಾಣತನವನ್ನೂ ನೋಡಿ, ನೆರೆದ ಸಮುದಾಯವು ಆಶ್ಚರ್ಯಮಗ್ನವಾಯಿತು. ಮಹಾರಾಜರವರು ಸಾಮಾನ್ಯ ಸಂನ್ಯಾಸಿಗಳಲ್ಲೆಂದು ಅವರು ನಿಶ್ಚಯಿಸಿದರು. ಪೌರಾಣಿಕ ಶಾಸ್ತ್ರಿಗಳಿಗಂತೂ ಇವರ ಪುರಾಣಶ್ರವಣದಿಂದ ನಾಚಿಕೆಯೂ ಭಯ-ಭಕ್ತಿಗಳೂ ಉಂಟಾದವು. ಆಗ ಅವರು ಗದ್ಗದಿತ ಕಂಠರಾಗಿ ಮಹಾರಾಜರ ಚರಣಗಳ ಮೇಲೆ ಬಿದ್ದು, ಅನೇಕ ವಿಧವಾಗಿ ಅವರನ್ನು ಸ್ತುತಿಸಿದರು. ಅಂದಿನಿಂದ ಪುರಾಣವನ್ನು ಹೇಳಲಿಕ್ಕೆ ಮಹಾರಾಜರೇ ಯೋಗ್ಯರೆಂದು ತಿಳಿದು, ಪೌರಾಣಿಕ ಶಾಸ್ತ್ರಿಗಳು ಮಹಾರಾಜರಿಗೆ ವಿನಂತಿ ಮಾಡಿಕೊಂಡರು. ಪುರಾಣಿಕರ, ಹಾಗು ಶ್ರೋತೃಮಂಡಳಿಯ ಆಗ್ರಹವು ಬಹಳವಾದ್ದರಿಂದ ದಿನಾಲು

ಪುರಾಣವನ್ನು ಹೇಳಲಿಕ್ಕೆ ಮಹಾರಾಜರವರು ಒಪ್ಪಿಕೊಂಡರು. ಜನರ ಮಹಾರಾಜರವರ ಅಸಾಧಾರಣ ಶಕ್ತಿಯನ್ನು ವರ್ಣಿಸುತ್ತ ತಮ್ಮ ತಮ್ ಮನೆಗಳಿಗೆ ಹೊರಟು ಹೋದರು. ಬ್ರಹ್ಮಾವರ್ತದ ಜನರನ್ನು ಸನ್ಮಾ ರ್ಗಕ್ಕೆ ಹಚ್ಚಲು ಇದೊಂದು ಸಂಧಿಯು ಅನಾಯಾಸವಾಗಿ ದೊರಕಿತೆಂದ ಮಹಾರಾಜರವರಿಗೂ ಸಮಾಧಾನವಾಯಿತು.

ಈ ಮೇರೆಗೆ ಮಹಾರಾಜರವರು ಪುರಾಣವನ್ನು ಹೇಳಹತ್ತಿ ಪಾಮರರನ್ನು ಉದ್ಧರಿಸುವ ಮಹಾಕಾರ್ಯವನ್ನು ಮಾಡತೊಡಗಿದರು ಇವರ ಪುರಾಣ ಶ್ರವಣಕ್ಕೆ ಸಾವಿರಾರು ಜನರು ನೆರೆಯ ಹತ್ತಿದರು ಚಾತುರ್ಮಾಸ್ಯವು ಮುಗಿಯುವದರೊಳಗೆ ಇಡಿ ಬ್ರಹ್ಮಾವರ್ತದ ನಿವಾಸಿಗಳ ಪೂರ್ಣ ಶ್ರದ್ಧೆಯು ಮಹಾರಾಜರಲ್ಲಿ ಕುಳಿತಿತು. ಧರ್ಮಲಂಡರಾದ ಎಷ್ಟೋ ಜನರು ಹಾದಿಗೆ ಬಂದು ಸತ್ಕರ್ಮನಿರತರಾದರು. ಪುರಾಣದ ನಿಮಿತ್ತ ದಿಂದ ಊರ ಜನರಿಗೂ ಮಹಾರಾಜರಿಗೂ ವಿಶೇಷ ಪರಿಚಯವಾದ್ದರಿಂದ ಮಹಾರಾಜರ ಬಳಿಯಲ್ಲಿ ಯಾವಾಗಲೂ ಜನರ ಗದ್ದಲವೇ ಇರುತ್ತಿತ್ತು ಎಷ್ಟೋ ಜನರು ತಮಗೆ ತಿಳಿಯದ ಶಾಸ್ತ್ರಗಳನ್ನು ಮಹಾರಾಜರಿಂದ ಕೇ ಕೊಳ್ಳುತ್ತಿದ್ದರು. ಬೇರೆ ಕೆಲವರು ಮಹಾರಾಜರಲ್ಲಿ ವಿದ್ಯಾಭ್ಯಾ ಮಾಡುತ್ತಿದ್ದರು. ಜ್ಯೋತಿಷ, ವೇದ, ವೇದಾಂತ, ಯೋಗ ಮೊ ಲಾದವುಗಳನ್ನು ಅಭ್ಯಾಸಿಸಲು ಎಷ್ಟೋ ಜನರು ಮಹಾರಾಜರ ಶಿಷ್ ರಾದರು. ಮಹಾರಾಜರು ಅಂತಃಕರಣಪೂರ್ವಕವಾಗಿ ಎಲ್ಲರಿಗ ಪಾಠಗಳನ್ನು ಹೇಳುತ್ತಿದ್ದರು. ಇತ್ತ ಪುರಾಣ ಮುಖದಿಂದ ಸದ್ಧರ್ ನಿರೂಪಣೆಯಂತೂ ದಿನಾಲು ನಡದೇ ನಡೆಯುತ್ತಿತ್ತು. ಈ ಪ್ರಕಾ ವಾಗಿ ಹಬ್ಬಿ ಹರಿಬಿದ್ದ ಮಹಾರಾಜರ ಕೀರ್ತಿಯನ್ನು ಕೇಳಿ, ಗ್ವಾಲ್ಹೇರ ಮಹಾಮಹೋಪಾಧ್ಯಾಯರಾದ ಗೋಪಾಲಾಚಾರ್ಯರೆಂಬವರು ಮಹಾ ರಾಜರ ದರ್ಶನಕ್ಕಾಗಿ ಬಂದರು. ಇವರು ವಿದ್ವಾಂಸರಿದ್ದರಷ್ಟೇ. ಅಲ್ಲ ಸುಶೀಲರೂ, ಭಗವದ್ಭಕ್ತರೂ ಆಗಿದ್ದರು. ಈ ಮಹನೀಯರು ಶಿಷ ರೊಡನೆ ಶ್ರೀ ರಾಮಮಂದಿರಕ್ಕೆ ಬಂದರು. ಆಗ ಮಹಾರಾಜರವರ ಪುರಾಣವನ್ನು ಹೇಳುತ್ತಿದ್ದರು. ಆಚಾರ್ಯರವರು ಗುಡಿಯೊಳ

ಕಾಲಿಟ್ಟ ಕೂಡಲೆ "ಶಿಷ್ಟಾಗಮನೇ ಅನಾಧ್ಯಾಯಃ' ಎಂದು ನುಡಿದರು. ಕೂಡಲೆ ಮಹಾರಾಜರವರು ಪುಸ್ತಕವನ್ನು ಕಟ್ಟಿ, ತಮ್ಮ ಆಶ್ರಮಕ್ಕೆ ಹೋಗಲು ಸಿದ್ಧರಾದರು. ಆಚಾರ್ಯರವರೂ ನೆರೆದ ಜನರೂ ಮಹಾರಾಜನ್ನು ಹಿಂಬಾಲಿಸಿ ನಡೆದರು. ಕೂಡಿದವರಲ್ಲಿ ಒಬ್ಬರು ಮಹಾರಾಜರಿಗೆ ಆಚಾರ್ಯರವರ ಪರಿಚಯವನ್ನು ಮಾಡಿಕೊಟ್ಟರು. ಆಚಾರ್ಯರವರ ಯೋಗ್ಯತೆಯನ್ನು ತಿಳಿದು ಮಹಾರಾಜರಿಗೆ ಬಹಳ ಆನಂದವಾಯಿತು. ಬಳಿಕ ಎಲ್ಲ ಜನರು ಹೊರಗೆ ನಿಂತುಕೊಳ್ಳಲು, ಮಹಾರಾಜರೂ-ಆಚಾರ್ಯರೂ ಪರ್ಣಕುಟೀರವನ್ನು ಪ್ರವೇಶ ಮಾಡಿದರು. ಸಗುಣ-ನಿರ್ಗುಣ ಉಪಾಸನೆಗಳ ಬಗ್ಗೆ ಬಹಳ ಚರ್ಚೆಯಾಗಿ, ಮಹಾರಾಜರವರ ಸಮರ್ಪಕ ಉತ್ತರಗಳಿಂದ ಆಚಾರ್ಯರವರಿಗೆ ಬಹು ಸಮಾಧಾನವಾಯಿತು. ಮರುದಿನ ಆಚಾರ್ಯರವರು ಮಹಾರಾಜರ ಅಪ್ಪಣೆಯನ್ನು ಪಡೆದು, ಸ್ವಗ್ರಾಮಕ್ಕೆ ಹೊರಟು ಹೋದರು. ಈ ಪ್ರಕಾರವಾಗಿ ಬೇರೆ ಬೇರೆ ಕಡೆಯ ಪಂಡಿತರು ಮಹಾರಾಜರ ದರ್ಶನದಿಂದ ತಮ್ಮ ತಮ್ಮ ಸಂಶಯ ನಿವೃತ್ತಿಯನ್ನು ಮಾಡಿಕೊಂಡು ಹೋಗುತ್ತಿರಲು, ಮಹಾರಾಜರವರು ಬ್ರಹ್ಮಾವರ್ತಕ್ಕೆ ಬಂದು ಒಂದೂವರೆ ವರ್ಷವು ಕ್ರಮಿಸಿ ಹೋಯಿತು. ಆಗ ಅವರು ಒಂದೇ ಊರಲ್ಲಿ ಬಹಳ ದಿವಸಗಳ ವರೆಗೆ ಇರುವದು ಧರ್ಮಜಾಗ್ರತೆಯ ಕಾರ್ಯಕ್ಕೆ ಬಾಧಕವೆಂದು ತಿಳಿದು, ಹರಿದ್ವಾರದ ಕಡೆಗೆ ಸಾಗಿದರು. ಅವರು ಹರಿದ್ವಾರದಲ್ಲಿ ಐದು ದಿವಸಗಳ ವರೆಗೆ ಇದ್ದು, ಪಹಾಡ, ಬದ್ರಿನಾರಾಯಣ, ಕೇದಾರ, ಗಂಗೋತ್ರಿ ಮೊದಲಾದ ಯಾತ್ರೆಗಳನ್ನು ಮಾಡಿಕೊಂಡು ಪುನಃ ಹರಿದ್ವಾರಕ್ಕೆ ಬಂದರು. ಉತ್ತರ ಪ್ರಾಂತದ ಜನರು ಧರ್ಮಬುದ್ಧಿಯಿಂದ ಯಾತ್ರಿಕರಿಗೆ ಬಹುಪರಿಯಿಂದ ಅನುಕೂಲ ಮಾಡುವರು; ಆದರೆ ನಮ್ಮ ಟೇಂಬೇಮಹಾರಾಜರವರು ಒಳ್ಳೇ ವೈರಾಗ್ಯಶಾಲಿಗಳಾದ್ದರಿಂದ ಪ್ರವಾಸದಲ್ಲಿ ಭಿಕ್ಷೆಯ ಹೊರತು ಜನರಿಂದ ಯಾವ ಸಹಾಯವನ್ನೂ ಹೊಂದಲಿಲ್ಲ. ಪಹಾಡ-ಬದರೀನಾರಾಯಣದಂಥ ಶೀತ ಪ್ರದೇಶಗಳ ಯಾತ್ರೆಗಳಿಗೆ ಹೋಗುವಾಗ ಸಹ, ಅವರು ಜನರು ಸಮರ್ಪಿಸುವ ಪ್ರಾವರಣಗಳನ್ನು ಇಸಗೊಳ್ಳಲಿಲ್ಲ. ಹಿಮಾ

ಲಯದಂಥ ಥಂಡಿಯ ಸಾಮ್ರಾಜ್ಯದೊಳಗೆ ಅವರು ಬರಿಯ ಎರಡು ಶಾಟಿಗಳ ಮೇಲೆಯೇ ಕೆಲಸ ಸಾಗಿಸಿಕೊಂಡರೆಂದ ಬಳಿಕ 'ಶೀತೋಷ್ಣ ಸುಖದುಃಖದಾಃ'' ಎಂಬ ಭಗವದುಕ್ತಿಯನ್ನು ಇವರು ಸಂಪೂರ್ಣವಾಗಿ ಅನುಸರಿಸಿದರೆಂಬದು ವ್ಯಕ್ತವಾಗುತ್ತದೆ. ಈ ಮಹಾತ್ಮರು ಇಂಥ ಕಠಿಣವಾದ ಯಾತ್ರೆಗಳಲ್ಲಿ ಮನಸ್ಸಿನ ಸ್ಥೈರ್ಯವನ್ನು ಚನ್ನಾಗಿ ಪಾಲಿಸಿ, ಮನೋಬಲವುಳ್ಳವರಿಗೆ ಯಾವ ಕೆಲಸವೂ ಅಸಾಧ್ಯವಲ್ಲೆಂಬದನ್ನು ತೋರಿಸಿಕೊಟ್ಟರು.

ಮಹಾರಾಜರವರು ಹರಿದ್ವಾರಕ್ಕೆ ಎರಡನೇ ಸಾರೆ ಬಂದಾಗ ಆ ವರ್ಷದ ಚಾತುರ್ಮಾಸ್ಯವನ್ನು ಅಲ್ಲಿಯೇ ಕಳೆದರು. ಆ ಊರಲ್ಲಿ ಅಧ್ಯಯನಕ್ಕೆ ಯೋಗ್ಯರಾದವರು ಯಾರೂ ಸಿಗದ್ದರಿಂದ, ಮಹಾರಾಜರವರು ಇಲ್ಲಿ ಅಧ್ಯಾಪನದ ಕೆಲಸವನ್ನು ಮಾಡಲಿಲ್ಲ. ಈ ಪ್ರಕಾರ ಅವರು ಹರಿದ್ವಾರದಲ್ಲಿ ನಾಲ್ಕು ತಿಂಗಳು ಇದ್ದು ಸಾಧಿಸಿದಷ್ಟು ಜನರಿಗೆ ಧರ್ಮೋಪದೇಶ ಮಾಡಿ ಪುನಃ ಬ್ರಹ್ಮಾವರ್ತಕ್ಕೆ ಬಂದರು. ಹರಿದ್ವಾರದಿಂದ ಬ್ರಹ್ಮಾವರ್ತಕ್ಕೆ ಬರುವಾಗ ದಾರಿಯಲ್ಲಿ ೧೮ ದಿವಸಗಳ ವರೆಗೆ 'ಭುಯಿಮೂಗಿ'ನ ಕಾಳಿನ ಮೇಲೆ ನಿರ್ವಾಹ ಸಾಗಿಸಬೇಕಾಯಿತು. ಬಳಿಕ ಅವರು ಅಲ್ಲಿ ಎಂಟು ದಿವಸಗಳ ವರೆಗೆ ಇದ್ದು, ಅಲ್ಲಿಂದ ದ್ವಾರಕೆಯ ಕಡೆಗೆ ಸಾಗಿದರು. ಹಾದಿಯಲ್ಲಿ ಮಹಾರಾಜರವರು ಒಂದು ಹಳ್ಳಿಯಲ್ಲಿ ವಸತಿಯನ್ನು ಮಾಡಿರಲು, ರಾತ್ರಿಯಲ್ಲಿ ಅವರಿಗೆ ಭಯಂಕರವಾದ ಒಂದು ಸರ್ಪವು ಕಚ್ಚಿತು. ಮಹಾರಾಜರ ಬಳಿಯಲ್ಲಿದ್ದ ಆ ಹಳ್ಳಿಯ ಜನರಿಗೆ ಬಹಳ ಅಸಮಾಧಾನವಾಯಿತು. ಅವರು ವಿಷಧೋಪಾಯಗಳನ್ನು ಮಾಡಬೇಕೆಂದು ಯತ್ನಿಸಲು, ಮಹಾರಾಜರು ಅವರನ್ನು ಹುರಿಹಾಯಗೊಡಲಿಲ್ಲ. ಮುಂದೆ ಏನಾಗುವದೋ ಎಂದು ಜನರು ಖಿನ್ನಮನಸ್ಕರರಾಗಿರಲು, ಮಹಾರಾಜರಿಗೆ ಸಮಾಧಿಯು ಹತ್ತಿತು. ಮುಂದೆ ೮ ತಾಸುಗಳ ಮೇಲೆ ಅವರು ಸಮಾಧಿಯನ್ನು ಇಳಿಸಲು, ಇನ್ನೂ ವಿಷವು ಕಡಿಮೆಯಾಗಿದ್ದಿಲ್ಲ. ಆಗ ಪುನಃ ಸಮಾಧಿಯನ್ನು ಏರಿಸಿದರು. ಈ ಸೇರೆಗೆ ಸಮಾಧಿಯಲ್ಲಿ ಎರಡು ದಿವಸಗಳು ಕಳೆದು ಹೋದವು; ಆದರೂ ಮಹಾರಾಜರಿಗೆ ವಿಷಬಾಧೆಯು ನಿಶ್ಶೇಷವಾಗಲಿಲ್ಲ. ಆಗ ಹಾವು ಕಚ್ಚಿದ ಸ್ಥಳವನ್ನು

ನೋಡಲು, ಅದರಲ್ಲಿ ವಿಷದಂತವೇ ಮುರಿದಿತ್ತು. ಜನರು ಅದನ್ನು ಕಿತ್ತು ತೆಗೆದರು. ಬಳಿಕ ವಿಷವು ಇಳಿದು ಅವರಿಗೆ ಸಮಾಧಾನವಾಯಿತು. ಸರ್ಪವು ಮಹಾರಾಜರನ್ನು ಕಡಿಯುವ ನಿಮಿತ್ಯದಿಂದ ಸ್ಪರ್ಶ ಮಾಡಿದರೂ ತನ್ನ ದುಷ್ಟತನಕ್ಕೆ ಮೂಲವಾದ ವಿಷದಂತವನ್ನು ಕಳಕೊಂಡು ಸಾಧುವಾಯಿತು. ಇದಕ್ಕೆ ಸತ್ಪುರುಷರ ಕೃಪೆಯೆಂದು ಅನ್ನಬಹುದಲ್ಲವೇ?

ಈ ಮೇರೆಗೆ ಮಹಾರಾಜರವರು ಮಾರ್ಗಕ್ರಮಣ ಮಾಡುತ್ತಿರಲು, ಸಾರಂಗಪುರದಲ್ಲಿ ಕೇಶವರಾಯರೆಂಬ ಒಬ್ಬ ಡಾಕ್ಟರರು ಕೂಡಿದರು. ಅವರು ಸುಧಾರಕರು, ಕೇವಲ ನಾಸ್ತಿಕರಿದ್ದರು. ಅವರಿಗೆ ಧರ್ಮದಲ್ಲಿ ಭಕ್ತಿಯಿದ್ದಿಲ್ಲ. ವೈದಿಕ ಮಾರ್ಗವನ್ನಂತೂ ಅವರು ತೀರ ತಿರಸ್ಕರಿಸುತ್ತಿದ್ದರು. ಮಹಾರಾಜರು ಕೇಶವರಾಯರನ್ನು ಚನ್ನಾಗಿ ಬೋಧಿಸಿ, ಅವರ ನಾಸ್ತಿಕ ವಾದವನ್ನು ಹೋಗಲಾಡಿಸಿದರು. ಕೇಶವರಾಯರು ನಿರುತ್ತರರಾಗಿ ಮಹಾರಾಜರಿಗೆ ಶರಣು ಹೋದರು. ಮಹಾರಾಜರು ಅವರನ್ನು ಒಳ್ಳೇ ಕರ್ಮಠ ಸುಶೀಲ ಬ್ರಾಹ್ಮಣರನ್ನಾಗಮಾಡಿದರು. ದ್ವಾರಕೆಯನ್ನು ಮುಟ್ಟಿದ ಮೇಲೆ ಮಹಾರಾಜರವರು ಅಲ್ಲಿ ಎಂಟು ತಿಂಗಳು ಇದ್ದರು. ಈ ಅವಧಿಯಲ್ಲಿ ಸಂಸ್ಕೃತ ಗುರುಚರಿತ್ರವು ಮಹಾರಾಜರಿಂದ ಪೂರ್ಣವಾಯಿತು. ಬಳಿಕ ಮಹಾರಾಜರು ರಾಜಕೋಟಕ್ಕೆ ಬಂದರು. ಇವರ ಪ್ರಭಾವವನ್ನು ತಿಳಿದು ಜನರು ದರ್ಶನಕ್ಕೆ ಬರತೊಡಗಿದರು. ಯಾವಾಗಲೂ ಮಹಾರಾಜರ ಬಳಿಯಲ್ಲಿ ಜನರ ಜಾತ್ರೆಯೇ ನೆರೆದಂತಾಗಿರುತ್ತಿತ್ತು. ಮಹಾರಾಜರು ವೈದಿಕ ಧರ್ಮದ ತತ್ವಗಳನ್ನು ವಿಶದವಾಗಿ ಬೋಧಿಸುತ್ತ, ಧರ್ಮಲಂಡರ ಮನಸ್ಸನ್ನು ಕೂಡ ಜಗ್ಗಿ ತಂದು ಸತ್ಕರ್ಮದಲ್ಲಿ ತೊಡಗಿಸಹತ್ತಲು, ದಯಾನಂದರ ಶಿಷ್ಯರಲ್ಲೊಬ್ಬನಿಗೆ ಮಾತ್ಸರ್ಯವು ಹುಟ್ಟಿತು. ಆತನು ತಮ್ಮ ಗುರುಗಳ ಸುಧಾರಕ ಪಂಥವು ಹಿಮ್ಮೆಟ್ಟುವದನ್ನು ನೋಡಿ, ಏನಾದರೊಂದು ಉಪಾಯದಿಂದ ಮಹಾರಾಜರನ್ನು ಈ ಊರ ಬಿಟ್ಟು ಓಡಿಸಬೇಕೆಂದು ಹಂಚಿಕೆ ಹಾಕಹತ್ತಿದನು.

ಒಂದು ದಿನ ಮಹಾರಾಜರವರು ಆಶ್ರಮದಲ್ಲಿ ಒಬ್ಬರೇ ಕುಳಿತು

ಕೊಂಡಿದ್ದರು. ಹತ್ತಿರ ಶಿಷ್ಯರಾರೂ ಇದ್ದಿಲ್ಲ. ಈ ಸಂಧಿಯನ್ನು ಸಾಧಿಸಿ ಮೇಲೆ ಹೇಳಿದ ದಯಾನಂದರ ಶಿಷ್ಯನು ಮಹಾರಾಜರ ಆಶ್ರಮ ವನ್ನು ಹೊಕ್ಕನು; ಮತ್ತು ಮನಸೋಕ್ತವಾಗಿ ಅವರನ್ನು ಬಯ್ಯತೊಡ ಗಿದನು. ಆಗ ಮಹಾರಾಜರವರು ಶಾಂತಮುದ್ರೆಯಿಂದ:—ಅಪ್ಪಾ, ಈ ನಿನ್ನ ಬೈಗಳು ನನಗೇನೂ ಸಂಬಂಧಿಸಿದವು ಅಲ್ಲ. ನಿನಗೆ ಸಮಾಧಾನ ವಾಗಬೇಕಾಗಿದ್ದರೆ, ನನ್ನನ್ನು ಹೊಡೆದಾದರೂ ಸಮಾಧಾನ ಮಾಡಿಕೋ; ಎಂದು ಕಪಾಳವನ್ನು ಮುಂದೆ ಮಾಡಿದರು. ದಯಾನಂದರ ಶಿಷ್ಯನ ಈ ಅಘೋರ ಕೃತಿಯನ್ನು ನೋಡಿ ಒಬ್ಬ ಹೆಣ್ಣುಮಗಳು ಓಡುತ್ತ ಹೋಗಿ ಜನರಿಗೆ ಸುದ್ದೀ ಹೇಳಿದಳು. ಇದನ್ನು ಕೇಳಿ ಮಹಾರಾಜರ ಶಿಷ್ಯಪರಿ ವಾರವು ಧಾವಿಸಿ ಬಂದಿತು. ಇದನ್ನು ನೋಡಿ ದಯಾನಂದರ ಶಿಷ್ಯನು ಗಾಬರಿಯಾಗಿ ಓಡತೊಡಗಲು, ಈ ಜನರ ಕೈಯಲ್ಲಿ ಸಿಕ್ಕನು. ದಯಾ ಸಾಗರನೆಂಬ ಮಹಾರಾಜರ ಶಿಷ್ಯನೋರ್ವನು ಅವನನ್ನು ಚನ್ನಾಗಿ ತಾಡನ ಮಾಡಹೋದನು. ಆಗ ಮಹಾರಾಜರು ದಯಾಸಾಗರನನ್ನು ಕರೆದು — ನಿನ್ನ ಹೆಸರೇನು ಇರುವದು? ಎಂದು ಕೇಳಿದರು. ಆಗ ದಯಾಸಾಗರನು ನಾಚಿಕೊಂಡನು. ಮಹಾರಾಜರು ಎಲ್ಲ ಜನರನ್ನು ಕುರಿತು:—ಅಜ್ಞಾನ ದಿಂದ ಇವನು ಇಂಥ ಕೆಲಸಕ್ಕೆ ಕೈಹಾಕಿರುವನು. ತಿಳುವಳಿಕೆ ಬಂದ ಬಳಿಕ ಇವನಿಂದ ಇಂಥ ಕೆಲಸಗಳಾಗಲಿಕ್ಕಿಲ್ಲ. ಇವನನ್ನು ಹಿಂಸಿಸದೆ ಬಿಟ್ಟು ಬಿಡಿರೆಂದು ಹೇಳಿದರು. ದಯಾನಂದರ ಶಿಷ್ಯನು ಅಸೂಯೆಯನ್ನು ಬಿಟ್ಟು, ಮಹಾರಾಜರಿಗೆ ನಮಸ್ಕಾರ ಮಾಡಿ ಹೊರಟು ಹೋದನು.

ಮಹಾರಾಜರು ಮಂಡಲೇಶ್ವರಕ್ಕೆ ಬರಲು, ಅಲ್ಲಿ ಪ್ಲೇಗರೋಗವು ಪ್ರಾರಂಭವಾಯಿತು. ಭಯಂಕರವಾದ ಆ ರೋಗದಿಂದ ಸಾವಿರಾರು ಜನರು ಸಾಯುವದನ್ನೂ, ಅವರ ಆಪ್ತೇಷ್ಟರು ಗೋಳಿಡುವದನ್ನೂ ನೋಡಿ ಅವರಿಗೆ ಕರುಣ ಹುಟ್ಟಿತು. ಈ ಮಹಾನುಭಾವರು ಜನರ ಪಾಪಕರ್ಮವನ್ನು ಮನಸ್ಸಿನಲ್ಲಿ ತಂದು, ಕೆಲವು ಗೃಹಸ್ಥರನ್ನು ಕರೆಯಿಸಿ ವೇದಪಾರಾಯಣ ಮಾಡಿಸಲು ಸೂಚಿಸಿದರು. ಆ ಸದ್ಗೃಹಸ್ಥರು ವೇದ ಪಾರಾಯಣವನ್ನು ಯೋಗ್ಯರಾದ ಬ್ರಾಹ್ಮಣರಿಂದ ಮಾಡಿಸಲು, ಆ

ಊರಲ್ಲಿ ಪ್ಲೇಗವು ಶಾಂತವಾಯಿತು. ಜನರಲ್ಲಿ ವೈದಿಕ ಧರ್ಮದ ವಿಷಯವಾಗಿ ಶ್ರದ್ಧೆಯುಉ ಉತ್ಪನ್ನವಾಯಿತು. ಅಧ್ಯಯನ ಮಾಡಿದ ಬ್ರಾಹ್ಮಣರನ್ನು ಆದರಿಸಹತ್ತಿದರು. ಅಲ್ಲಿಯ ಕಲೇಕ್ಟರನು ಬ್ರಾಹ್ಮಣನಿದ್ದದರಿಂದ ಮಹಾರಾಜರನ್ನು ಬಹಳವಾಗಿ ಗೌರವಿಸಿ, ವೇದಧರ್ಮಾಭಿಮಾನವನ್ನು ವಹಿಸಿದನು ಮಹಾರಾಜರವರು ಆ ಊರಲ್ಲಿ ಭಾಗವತಾದಿ ಪುರಾಣಗಳನ್ನು ಹೇಳಿ ಜನರನ್ನು ಒಳಿತಾಗಿ ಸುಧಾರಿಸಿದರು. ಕಲೇಕ್ಟರರಾದ ವಾಮನರಾಯರಂತೂ ಮಹಾರಾಜರ ಪುರಾಣಕ್ಕೆ ತಪ್ಪದೆ ಬರುತ್ತಿದ್ದರು. ಒಂದು ದಿನ ವಾಮನರಾಯರು ಮನೆಗೆ ಹೋಗುವಷ್ಟರಲ್ಲಿ ಅವರ ಮನೆಯಲ್ಲಿ ಒಂದು ಸಶಕ್ತ ಆಕಳವು ಒಮ್ಮಿಂದೊಮ್ಮೆ ರೋಗಗ್ರಸ್ತವಾಗಿ ಈಗ ಸಾಯುುವದೋ ಇನ್ನೊಂದು ಗಳಿಗೆಗೆ ಸಾಯುುವದೋ ಎಂಬಂತಾಗಿತ್ತು. ವಾಮನರಾಯರ ಪ್ರೇಮವು ಆ ಗಾಯತ್ರಿಯ ಮೇಲೆ ಬಹಳವಿತ್ತು. ತಮ್ಮ ಪ್ರೀತಿಯ ಆಕಳವು ಇಷ್ಟು ನಿಕೃಷ್ಟಾವಸ್ಥೆಯನ್ನು ಒಮ್ಮಿಂದೊಮ್ಮೆ ಹ್ಯಾಗೆ ಹೊಂದಿತೆಂದು ಅವರು ಯೋಚಿಸಿದರು. ಆದರೆ ಹ್ಯಾಗೆ ತಿಳಿಯಬೇಕು? ಕಡೆಗೆ ಅವರು: - ಏನೇ ಆಗಲಿ, ಈ ಆಕಳವನ್ನು ಮಹಾರಾಜರ ಕಣ್ಣಿಗೆ ಹಾಕಿ ಬಿಡಬೇಕೆಂದು ಇಚ್ಛಿಸಿ ಅದನ್ನು ಮಹಾರಾಜರ ಬಳಿಗೆ ಒಯ್ದರು. ಮಹಾರಾಜರವರು ಮಲಗಿಕೊಂಡಿದ್ದರು; ಆಗ ಸುಮಾರು ಏಳೆಂಟು ತಾಸು ರಾತ್ರಿಯಾಗಿರಬಹುದು. ವಾಮನರಾಯರು ಶಿಷ್ಯರ ಸಂಗಡ ಮೆಲ್ಲನೆ ಮಾತಾಡುತ್ತಿರಲು, ವಾಮನರಾಯರ ದನಿ ಕೇಳಿ ಮಹಾರಾಜರು ಹೊರಗೆ ಬಂದರು; ಮತ್ತು: — ವಾಮನರಾವಜೀ, ಇದೇ ಈಗ ಹೋದವರು ಮತ್ತೆ ಯಾಕೆ ಬಂದಿರಿ? ಎಂದು ಕೇಳಿದರು. ಆಗ ವಾಮನರಾಯರು ತಮ್ಮ ಆಕಳ ಸಂಗತಿಯನ್ನು ಹೇಳಿದರು. ಮಹಾರಾಜರು ಆ ಆಕಳನ್ನು ಕಣ್ಮುಟ್ಟ ನೋಡಿ, ಒಳಗೆ ಹೋಗಿ ಏನೋ ತಂದು ಅದಕ್ಕೆ ಹಚ್ಚಿದರು. ಕೂಡಲೆ ಆಕಳವು ಎದ್ದು ನಿಂತು ಮನೆತನಕ ಓಡುತ್ತ ಹೋಯಿತು. ತಮ್ಮ ಆಕಳ ಮೇಲೆ ಬಂದಿದ್ದ ಅರಿಷ್ಟವು ನಿವಾರಣವಾಗಲು, ವಾಮನರಾಯರಿಗೆ ಪರಾಕಷ್ಟವಾದ ಆನಂದವುಂಟಾಗಿ, ಮಹಾರಾಜರ ಚರಣಗಳನ್ನು ಗಟ್ಟಿಯಾಗಿ ಹಿಡಕೊಂಡರು. ಆಗ

ಮಹಾರಾಜರು ಸಂತುಷ್ಟರಾಗಿ ವಾಮನರಾಯರಿಗೆ:-"ಹೀಗೆಯೇ ಗೋ-ಬ್ರಾಹ್ಮಣರನ್ನು ಪೂಜಿಸುತ್ತ ಹೋಗಿರಿ" ಎಂದು ಆಶೀರ್ವಾದ ಮಾಡಿದರು.

## ಶಿಷ್ಯವಾತ್ಸಲ್ಯ.



ಕಸ್ತೂರಿಯ ಪರಿಮಳಕ್ಕೆ ಭ್ರಮರಗಳು ಮುತ್ತುವಂತೆ, ಸತ್ಪುರುಷರ ನಿರ್ಮಲವೃತ್ತಿಯು ಪ್ರಭಾವಕ್ಕೆ ಮನಸೋತು ಎಷ್ಟೋ ಜನರು ಅವರ ಶಿಷ್ಯತ್ವವನ್ನು ವಹಿಸುವರು. ಅದರಂತೆ ನಮ್ಮ ಚರಿತ್ರನಾಯಕರ ಬಳಿಯಲ್ಲಿಯೂ ಅನೇಕ ಜನರು ಸೇವೆಗೆ ಬಂದು ನಿಂತಿದ್ದರು ಅವರಲ್ಲಿ ನಿಗುಡಕರ ಅಪ್ಪಾ, ವೆಂಕಟರಾವ ಸ್ಟೇಶನ್‌ಮಾಸ್ತರ, ಗಾಂಡಾಬುವಾ ಮೊದಲಾದವರು ವಿಶೇಷವಾಗಿ ಮಹಾರಾಜರ ಕೃಪೆಗೆ ಪಾತ್ರರಾಗಿದ್ದರು. ಈ ತ್ರಿವರ್ಗರು ಒಳ್ಳೇವೈರಾಗ್ಯಸಂಪನ್ನರು. ಇವರನ್ನು ೩ ವರ್ಷಗಳ ವರೆಗೆ ಪರೀಕ್ಷಿಸಿ, ಇವರ ನಿಷ್ಠೆಯು ಆಳವನ್ನು ನೋಡಿದ ಬಳಿಕ ಮಹಾರಾಜರವರ ಪ್ರೀತಿಯೂ ಇವರ ಮೇಲೆ ಕೂತಿತು. ನಾಲ್ಕು ಪ್ರಕಾರದ ಗುರುಗಳಲ್ಲಿ ಮಹಾರಾಜರವರು 'ಮರ್ಕಟಕಿಶೋರ' ನ್ಯಾಯದವರು. ಮರ್ಕಟವು ಗಿಡಗಿಡವನ್ನು ಹಾರುವಾಗ ಅದರ ಮರಿಯು ತಾಯಿಯನ್ನು ಗಟ್ಟಿಯಾಗಿ ಅವಚಿಕೊಳ್ಳುತ್ತಿದೆ. ತಾಯಿಯು ಮನಸ್ಸಿನಲ್ಲಿ ವಾತ್ಸಲ್ಯವಿದ್ದರೂ ಮರಿಯು ಬೀಳದಂತೆ ಅದನ್ನು ಹಿಡಿಯಲಿಕ್ಕೆ ಹೋಗುವದಿಲ್ಲ. ಹೀಗೆ ಮರಿಯೇ ಮರ್ಕಟವನ್ನು ಅನುಸರಿಸುವಂತೆ ಶಿಷ್ಯರೇ ಗುರುಗಳನ್ನು ಅನುಸರಿಸಬೇಕಾಗುತ್ತದೆ. ತಮ್ಮ ತೂಕಕ್ಕೆ ಇಳಿಯದ ಶಿಷ್ಯರನ್ನು ಮಹಾರಾಜರು ಎಂದೂ ಪ್ರೀತಿಸುತ್ತಿರಲಿಲ್ಲ. ಮೇಲೆ ಬರೆದ ಆ ಮೂವರು ಶಿಷ್ಯರು ನಿಕಟವನ್ನು ತೋರಿಸಿದ್ದರಿಂದ ಮಹಾರಾಜರು ಅವರಿಗೆ ಯೋಗವನ್ನು ಉಪದೇಶಿಸಿದರು. ಆ ತ್ರಿವರ್ಗರ ಯೋಗಾಭ್ಯಾಸವು ನಡೆಯಿತು. ಯೋಗಸಾಧನ ಮಾಡುವವರು 'ಖೇಚರಿ' ಎಂಬ ಮುದ್ರೆಯ ಸಲುವಾಗಿ ಜಿಹ್ವಾಛೇದವನ್ನು ಮಾಡಿಕೊಳ್ಳಬೇಕಾಗುತ್ತದೆಯೆಂತೆ! ಆ ಮೂವರು ಯೋಗಾಭ್ಯಾಸಿಗಳು ಮಹಾರಾಜರ ಅಪ್ಪಣೆಯಿಂದ ಜಿಹ್ವಾಛೇದನ ಮಾಡಿ

ಕೊಳ್ಳುವದಕ್ಕಾಗಿ ವಿಶ್ವನಾಥರಾವ ತಾಟಕೆ ಎಂಬವರ ಕಡೆಗೆ ಹೋದರು. ವಿಶ್ವನಾಥರಾಯರು 'ಗುಣಾಭಾವಣಿ'ಯಲ್ಲಿ ಡಾಕ್ಟರರಿದ್ದರು. ಇವರು ಮಹಾರಾಜರ ಭಕ್ತರು. ಅವರ ಉಪದೇಶದಿಂದಲೇ ಧರ್ಮಲಂಡತನವನ್ನು ಬಿಟ್ಟು ಈಗೀಗ ಆಚಾರಸಂಪನ್ನರಾಗಿ ನಡೆಯುತ್ತಿದ್ದರು. ಇವರು ಗುರುಗಳ ಅಪ್ಪಣೆಯ ಮೇರೆಗೆ ಆ ಯೋಗಾಭ್ಯಾಸಿಗಳ ಜಿಹ್ವಾಭೇದವನ್ನು ಮಾಡಿದರು; ಆದರೆ ಅಪ್ಪಾ, ಹಾಗು ವೆಂಕಟರಾಯರ ನಾಲಿಗೆಯ ಮುಖ್ಯ ನರಗಳು ಹರಿದದ್ದರಿಂದ, ರಕ್ತವು ಹರಿಯಹತ್ತಿ ಕೆಲಹೊತ್ತಿನ ಮೇಲೆ ಅವರಿಬ್ಬರು ನಿಶ್ಚೇಷ್ಟಿತರಾಗಿ ಬಿದ್ದರು.

ವಿಶ್ವನಾಥರಾಯನು ರಕ್ತಸ್ರಾವವನ್ನು ನಿಲ್ಲಿಸಲಿಕ್ಕೆ ವಿಶ್ವಪ್ರಯತ್ನ ಮಾಡಿದನು. ಯಾವ ಉಪಾಯದಿಂದಲೂ ಗುಣವಾಗದ್ದರಿಂದ ಅವನು ಗಾಬರಿಯಾದನು. ಆಗ ಅವನು ಮಹಾರಾಜರ ಕಡೆಗೆ ತಂತೀ ಮೂಲಕ ಸುದ್ದಿಯನ್ನು ಕಳಿಸಿದನು. ಮಹಾರಾಜರು ೪೦ ಮೈಲಿನ ಅಂತರದ ಮೇಲಿದ್ದರು. ಈ ಸುದ್ದಿಯು ಮುಟ್ಟಲು, ಅವರು ತಡಮಾಡದೆ ಹೊರಟು ವಿಶ್ವನಾಥರಾಯನ ಬಳಿಗೆ ಬಂದರು. ವಿಶ್ವನಾಥರಾಯನು ನಡೆದ ಸಂಗತಿಯನ್ನು ಅವರ ಮುಂದೆ ಹೇಳಲು, ಮಹಾರಾಜರು ಶಿಷ್ಯರೀರ್ವರನ್ನು ನೋಡಿ ಕನಿಕರಪಟ್ಟು ಒಂದು ಔಷಧಿಯನ್ನು ಹಚ್ಚಿದರು. ಕೂಡಲೆ ರಕ್ತಸ್ರಾವವು ನಿಂತಿತು ಮುಂದೆ ಸ್ವಲ್ಪ ಹೊತ್ತಿನ ಮೇಲೆ ಅಪ್ಪಾನು ಕಣ್ಣು ತೆರೆದನು. ಬಳಿಕ ಮಹಾರಾಜರು ನಾಲ್ಕು ದಿವಸಗಳವರೆಗೆ ಇದ್ದು ಅವರಿಬ್ಬರಿಗೂ ಗುಣವಾದ ಮೇಲೆ ಅವರೊಡನೆ ಉಜ್ಜಯಿನಿಗೆ ಹೋದರು. ಅಲ್ಲಿ ಗುರುಸ್ವಾಮಿಗಳ ದರ್ಶನ ತಕ್ಕೊಂಡು ಮಂಡಲೇಶ್ವರದ ಕಡೆಗೆ ಸಾಗಿದರು. ಇಂದೂರ ನಿವಾಸಿಗಳು ಮಹಾರಾಜರ ಪಾದಧೂಲಿಯು ಒಮ್ಮೆಯಾದರೂ ತಮ್ಮ ಊರಲ್ಲಿ ಬೀಳಬೇಕೆಂದು ಬಯಸುತ್ತಿದ್ದರು. ಮಹಾರಾಜರು ತಮ್ಮ ಗ್ರಾಮದ ಸಮೀಪದಲ್ಲಿಯೇ ಹಾದು ಹೋಗುವದನ್ನು ತಿಳಿದು, ಊರೊಳಗಿನ ಪ್ರತಿಷ್ಠಿತ ಜನರೂ, ಸೆಟ್ಟಿ ಸಾವುಕಾರರೂ, ಇಂದೂರ ಸಂಸ್ಥಾನಿಕರೂ ಕೂಡಿ ಮಹಾರಾಜರ ದರ್ಶನಕ್ಕೆ ಹೋದರು. ಮಹಾರಾಜರಿಗೂ ಈ ಜನರಿಗೂ ದಾರಿಯಲ್ಲಿಯೇ

ಭೆಟ್ಟಿಯಾಗಲು, ಇಂದೂರ ನಿವಾಸಿಗಳು ಮಹಾರಾಜರನ್ನು ಬಹುವಿಧ ವಾಗಿ ಪ್ರಾರ್ಥಿಸಿ, ತಮ್ಮ ಊರಿಗೆ ಬರಬೇಕೆಂದು ಹೇಳಿಕೊಂಡರು. ಮಹಾರಾಜರು ಅವರ ವಿನಂತಿಯನ್ನು ಮನ್ನಿಸಿ ಇಂದೂರಿಗೆ ಹೋದರು. ಅಲ್ಲಿ ವೇದ-ಶಾಸ್ತ್ರಧರ್ಮದ ಪಾಠಶಾಲೆಯ ಬಳಿಯಲ್ಲಿ ಒಂದು ಸರಕಾರೀ ಬಂಗಲೆಯೊಳಗೆ ಇಳಕೊಂಡರು. ೧೮ ದಿವಸಗಳ ವರೆಗೆ ಮಹಾರಾಜ ರಿಂದ ಉಪನಿಷತ್ತುಗಳನ್ನು ಶ್ರವಣ ಮಾಡಿ ಇಂದೂರ ನಿವಾಸಿಗಳು ಧನ್ಯತೆಯನ್ನು ಪ್ರಕಟಿಸಿದರು

ಬಳಿಕ ಮಹಾರಾಜರವರು ಇಂದೂರನ್ನು ಬಿಟ್ಟು ಜಾಲವಣ ಎಂಬ ಲ್ಲಿಗೆ ಹೋದರು. ಅಲ್ಲಿಯ ಕೆಲವು ಜನ ವಿದ್ವಾನ್ ಮಂಡಲಿಗೆ 'ಅರಣ' ವನ್ನು ಕಲಿಯುವ ಅಪೇಕ್ಷೆಯುಂಟಾಗಿದ್ದು, ಅವರ ಮನಸ್ಸಿನಂತೆ ಹೇಳು ವವರು ಸಿಗದ್ದರಿಂದ ಅವರ ಇಚ್ಛೆಯು ಪೂರ್ಣವಾಗದೆ ಹಾಗೆಯೇ ಉಳಿದಿತ್ತು. ಅಕಸ್ಮಾತ್ತಾಗಿ ಮಹಾರಾಜರು ಬರಲು, ಅವರ ಅಧಿಕಾರ ವನ್ನು ತಿಳಿದು, ಜಾಲವಣದ ಬ್ರಾಹ್ಮಣರಿಗೆ ಬಹು ಸಂತೋಷವಾಯಿತು. ಅವರು ಮಹಾರಾಜರಿಂದ ಸಾರ್ಥವಾಗಿ ಅರಣವನ್ನು ಹೇಳಿಸಿಕೊಂಡರು. ಮಹಾರಾಜರ ಮೇಲೆ ಅಲ್ಲಿಯ ಜನರು ಬಹಳ ಪ್ರೇಮ ಮಾಡುತ್ತಿದ್ದರು. ಹೀಗಿರಲು, ಕೆಲವು ದಿವಸಗಳ ಮೇಲೆ ಆ ಊರ ಬ್ರಾಹ್ಮಣರಲ್ಲಿ ಎರಡು ಬಣಗಳಿದ್ದದ್ದು ಮಹಾರಾಜರಿಗೆ ತಿಳಿಯಿತು. ಆಗ ಅವರು ಎಲ್ಲ ಬ್ರಾಹ್ಮಣರನ್ನು ಕರೆಯಿಸಿ:- ನಿಮ್ಮ ನಿಮ್ಮೊಳಗೆ ದ್ವೇಷವಿದ್ದಂತೆ ನನಗೆ ಕಂಡು ಬರುತ್ತದೆ. ಬ್ರಾಹ್ಮಣರು ಸತ್ಯವೃತ್ತಿಗೆ ಭಂಗ ಬರುವ ದ್ವೇಷಾ ಸೂಯೆಗಳಿಂದ ಪ್ರೇರಿತರಾಗಬಾರದು. ನೀವು ನಿಮ್ಮೊಳಗಿನ ವೈಷಮ್ಯ ಭಾವವನ್ನು ಸಂಪೂರ್ಣವಾಗಿ ಬಿಟ್ಟುಕೊಟ್ಟು ಎರಡೂ ಬಣದವರು ಐಕ್ಯ ಮತದಿಂದ ನಡೆದರೆ, ನಾನು ಇಲ್ಲಿ ನಾಲ್ಕು ದಿನ ನಿಂತುಕೊಳ್ಳುವೆನು; ಇಲ್ಲದಿದ್ದರೆ ಈ ಊರಲ್ಲಿ ಈ ದಿನ ಭಿಕ್ಷೆಯನ್ನು ಕೂಡ ಸ್ವೀಕರಿಸದೆ ಹೊರಟು ಹೋಗುವೆನು, ಎಂದು ಹೇಳಿದರು.

ಮಹಾರಾಜರ ಮಾತುಗಳನ್ನು ಕೇಳಿ ಆ ಬ್ರಾಹ್ಮಣರಿಗೆ ವಿವೇಕವು ಹುಟ್ಟಿತು. ಅವರು ತಮ್ಮ ಕೃತಿಗೆ ಪಶ್ಚಾತ್ತಾಪಪಟ್ಟು ಇನ್ನು ಮುಂದೆ

ನಾವು ನಮ್ಮೊಳಗಿನ ದ್ವೇಷವನ್ನು ಬಿಟ್ಟು ಸಖ್ಯದಿಂದ ನಡೆಯುತ್ತೇವೆ, ಎಂದು ವಚನ ಕೊಟ್ಟರು. ಮರುದಿನ 'ಬಾಳಾ ಬುವಾ' ಎಂಬವರು ಒಂದು ದೊಡ್ಡ ಸಮಾರಾಧನೆಯನ್ನು ಮಾಡಿ ಎಲ್ಲರಿಗೂ ಆಮಂತ್ರಣ ಕೊಟ್ಟರು. ಅಂದಿನಿಂದ ಆ ಊರ ಬ್ರಾಹ್ಮಣರ ಜಗಳವು ಶಾಂತವಾಗಿ ಊರಿಗೆ ಕ್ಷೇಮವಾಯಿತು. ಬಳಿಕ ಮಹಾರಾಜರವರು ಬ್ರಹ್ಮಾವರ್ತಕ್ಕೆ ಬಂದರು. ಈ ಸಾರೆ ಅವರು ಬ್ರಹ್ಮಾವರ್ತದಲ್ಲಿ ಎರಡೂವರೆ ವರ್ಷಗಳ ವರೆಗೆ ಇದ್ದರು. ಮಹಾರಾಜರಲ್ಲಿ ಕಲಿತ ಎಷ್ಟೋ ಜನರು ಈಗ ಪುರಾಣವನ್ನು ಹೇಳಲಿಕ್ಕೂ, ಹರಿಕೀರ್ತನವನ್ನು ಮಾಡಲಿಕ್ಕೂ ನುರಿತವರಾಗಿದ್ದರು. ಅವರಿಂದ ಪುರಾಣವನ್ನು ಹೇಳಿಸಿ, ಮಹಾರಾಜರು ಕೇಳುತ್ತ ಕೂಡ್ರುತ್ತಿದ್ದರು. ಈ ಸಾರೆಯ ದತ್ತಜಯಂತಿಯು ಅಲ್ಲಿ ಬಹು ವಿಜೃಂಭಣೆಯಿಂದ ಸಾಗಿತು ಗುರುಚರಿತ್ರೆಯ ಸಪ್ತಾಹಗಳು ೨೫-೩೦ರವರೆಗೆ ಆದವು. ಎಲ್ಲಿ ನೋಡಿದರೂ ಬ್ರಹ್ಮಾವರ್ತದಲ್ಲಿ ನಾಮಸಂಕೀರ್ತನ, ಪುರಾಣ, ಭಜನೆ ಇವೇ ನಡೆಯುತ್ತಿದ್ದವು.

ಗ್ವಾಲ್ಹೇರದ ಮಹಾಮಹೋಪಾಧ್ಯಾಯರಾದ ಗೋಪಾಲಾಚಾರ್ಯರು ಈ ಮೊದಲೇ ಮಹಾರಾಜರ ದರ್ಶನಕ್ಕೆ ಬಂದಿದ್ದರೆಂದು ಹಿಂದಿನ ಪ್ರಕರಣದಲ್ಲಿ ಹೇಳಿದೆಯಷ್ಟೇ; ಅವರಲ್ಲಿ ವ್ಯಾಕರಣ ಶಾಸ್ತ್ರವನ್ನು ಓದಿದ ಒಬ್ಬ ಶಾಸ್ತ್ರಿಯು ಈಗ ಮಹಾರಾಜರ ದರ್ಶನಕ್ಕೆ ಬಂದನು. ಈ ಶಾಸ್ತ್ರಿಯಲ್ಲಿ ಗರ್ವವು ಬಹಳವಿತ್ತು. ಪಾಂಡಿತ್ಯದ ಮದದಿಂದ ಅವನು ಎಷ್ಟೋ ಜನ ವಿದ್ವಾಂಸರ ಮಾನಖಂಡಣ ಮಾಡಿದ್ದನು. ಆತನು ತನ್ನ ಗುರುಗಳಲ್ಲಿದ್ದ ವಿದ್ಯೆಯನ್ನಷ್ಟೇ ಕಲಿತಿದ್ದನೇ ಹೊರತು, ಅವರಲ್ಲಿಯ ಸದ್ಗುಣಗಳನ್ನು ಕಲಿತಿದ್ದಿಲ್ಲ. ಈಗಾದರೂ ಆತನು ಮಹಾರಾಜರ ದರ್ಶನಕ್ಕೆ ದುಷ್ಟಹೇತುವಿನಿಂದಲೇ ಬಂದಿದ್ದನು. ಮಹಾರಾಜರ ಮಾನಖಂಡಣ ಮಾಡಿ, ಅವರಿಗಿಂತಲೂ ತಾನು ಶ್ರೇಷ್ಠನಾಗಬೇಕೆಂಬ ಹೆಮ್ಮೆಯು ಅವನನ್ನು ಅಂಧನನ್ನಾಗಿ ಮಾಡಿಬಿಟ್ಟಿತ್ತು. ಆತನು ಮೇಲೆ ಹೇಳಿದಂತೆ ಮಹಾರಾಜರ ಬಳಿಗೆ ಬಂದು ನಮಸ್ಕಾರ-ಚಮತ್ಕಾರಗಳನ್ನೇನೂ ಮಾಡದೆ, ಸುಮ್ಮನೆ ಕೂತುಕೊಂಡನು. ಆಗ ಮಹಾರಾಜರು ಪುರಾಣವನ್ನು

ಹೇಳುತ್ತ ಕುಳಿತುಕೊಂಡಿದ್ದರು. ಪುರಾಣವು ನಡೆದಿರಲು, ಶಾಸ್ತ್ರಯು ನಡುವೇ ಬಾಯಿ ಹಾಕಿ:—"ಈ ಸಮಾಸದ ವಿಗ್ರಹವು ಹೀಗೆ ಹ್ಯಾಗಾಗುತ್ತದೆ; ಅರ್ಥವನ್ನು ಹ್ಯಾಗೆ ಮಾಡುತ್ತೀರಿ" ಎಂಬದಾಗಿ ಪ್ರಶ್ನೆ ಮಾಡಿದನು. ಮಹಾರಾಜರು ಆತನ ಲಕ್ಷಣವನ್ನು ತಿಳಿದು ಅವನ ಪ್ರಶ್ನೆಗಳಿಗೆ ಸರಿಯಾಗಿ ಉತ್ತರವನ್ನು ಹೇಳಿದರು. ಅದರಿಂದ ಶಾಸ್ತ್ರಿಯು ಮುಖಭಂಗಿತನಾಗಿ ಸುಮ್ಮನೆ ಕುಳಿತನು. ಮುಂದೆ ಪುರಾಣವನ್ನು ಹೇಳುವಾಗ ಮಹಾರಾಜರು ತಮ್ಮ ಪಾಂಡಿತ್ಯವನ್ನು ಪ್ರಕಟ ಮಾಡಿದರು. ಅವರ ವಿದ್ವತ್ತೆಯನ್ನು ತಿಳಿದು ಶಾಸ್ತ್ರಿಯು ತೆಪ್ಪಗಾದನು; ಆದರೂ ಪರರ ಮಾನಖಂಡಣದಲ್ಲಿಯೇ ಸೌಖ್ಯವನ್ನು ಕಲ್ಪಿಸುವ ವಿವೇಕಶೂನ್ಯರಾದ ವಿದ್ವಾಂಸರು ಅನ್ಯರ ಛಿದ್ರಗಳನ್ನು ಆರಿಸುತ್ತಲೇ ಇರುತ್ತಾರೆ. ಅದರಂತೆ ಈ ಶಾಸ್ತ್ರಿಯು ಮಹಾರಾಜರ ವಿದ್ವತ್ತೆಯ ಮುಂದೆ ತನ್ನ ಆಟ ನಡೆಯದೆಂದು ತಿಳಿದು, ಅವರ ಆಚರಣೆಯನ್ನು ಶೋಧಿಸಹತ್ತಿದನು. ಅದರಲ್ಲಿ ಅವನಿಗೆ ಯಾವ ತಪ್ಪುಗಳೂ ಸಿಗಲಿಲ್ಲ, ಸಂನ್ಯಾಸಧರ್ಮಕ್ಕೆ ವಿರೋಧವಾದ ಆಚರಣೆಗಳು ಅವರಲ್ಲಿ ಒಂದೂ ಸಿಗದ್ದರಿಂದ ಶಾಸ್ತ್ರಿಯು ಚಡಪಡಿಸುತ್ತಿರಲು, ಅವರ ಮೂರ್ತಿಪೂಜೆಯು ಅವನ ಕಣ್ಣೆದುರಿಗೆ ಕಟ್ಟಿತು. ಆ ಕೂಡಲೆ ಅವನು ಮಹಾರಾಜರ ಬಳಿಗೆ ಹೋಗಿ:—"ನೀವು ಸಂನ್ಯಾಸಿಗಳಿದ್ದು ಮೂರ್ತಿಪೂಜೆಯನ್ನು ಯಾಕೆ ಮಾಡುತ್ತೀರಿ? ನಾನು ಗೃಹಸ್ಥನಿದ್ದು ಗಾಯತ್ರೀ ಪುರಶ್ಚರಣದ ವಿನಃ ಅನ್ಯೋಪಾಸನೆ ಮಾಡುವದಿಲ್ಲ," ಎಂದು ನುಡಿದನು. ಮಹಾರಾಜರು ಅವನ ಮೂರ್ಖತನಕ್ಕೆ ನಕ್ಕು, ಸೌಮ್ಯದಿಂದ:—"ನಿರ್ಗುಣೋಪಾಸನೆಯ ಅಧಿಕಾರವಿದ್ದವರಿಗೆ ಸಗುಣೋಪಾಸನೆಯ ಕಾರಣವಿಲ್ಲ. ನಾನು ಅಜ್ಞಾನಿಯು; ನಿರ್ಗುಣೋಪಾಸನದ ಅಧಿಕಾರವು ನನಗಿಲ್ಲ. ತಾವು ಜ್ಞಾನಿಗಳಿರಬಹುದು. ತಮಗೆ ನಿರ್ಗುಣೋಪಾಸನೆಯ ಅಧಿಕಾರವಿರಬಹುದು, ಎಂದು ನುಡಿದು ಸುಮ್ಮನಾದರು.

ಸತ್ಸಮಾಗಮದಿಂದ ಶಾಸ್ತ್ರಿಗೆ ಸದ್ಬುದ್ಧಿಯು ಹುಟ್ಟಿತು. ಅವನು ತನ್ನ ದುರಭಿಮಾನಕ್ಕೆ ಪಶ್ಚಾತ್ತಾಪಪಟ್ಟು ಮಹಾರಾಜರಿಗೆ ಶರಣು

ಹೋದನು. ಅವನಲ್ಲಿ ಲೀನಭಾವವು ಅಂಕುರಿಸಿದ್ದನ್ನು ನೋಡಿ, ಮಹಾರಾಜರಿಗೆ ಪರಮಾನಂದವಾಯಿತು. ಸತ್ಪುರುಷರು ಸದ್ಗುಣಗಳಿಂದಲೇ ಸಂತುಷ್ಟರಾಗುವರೆಂದು ನಿದರ್ಶನಕ್ಕೆ ಬಂದಿತು. ಬಳಿಕ ಆ ಶಾಸ್ತ್ರಿಯು ಬ್ರಹ್ಮಾವರ್ತದಲ್ಲಿ ಬೇರೆ ಕಡೆಗೆ ಪುರಾಣ ಹೇಳಲಿಕ್ಕೆ ಅಪ್ಪಣೆ ಕೊಡಬೇಕೆಂದು ಮಹಾರಾಜರನ್ನು ಕೇಳಿಕೊಂಡನು. ಆಗ ಮಹಾರಾಜರವರು ಯೋಚಿಸಿ:—ಶಾಸ್ತ್ರಿಗಳೇ, ನೀವು ಬೇರೆ ಕಡೆಗೆ ಪುರಾಣ ಹೇಳಹತ್ತಿದರೆ ನಿಮ್ಮ ಪುರಾಣಕ್ಕೆ ಜನರು ಬರಲಿಕ್ಕಿಲ್ಲ. ನಿಮಗೆ ಪುರಾಣ ಹೇಳುವ ಅಪೇಕ್ಷೆಯಿದ್ದರೆ ನಾನು ಪುರಾಣ ಹೇಳುವದನ್ನು ಬಿಟ್ಟುಬಿಡುತ್ತೇನೆ. ಇಲ್ಲಿಯೇ ನೀವು ಪುರಾಣವನ್ನು ಹೇಳಿರಿ, ಎಂದು ಅಂದರು. ಶಾಸ್ತ್ರಿಗಳು ಮಹಾರಾಜರು ತೋರಿಸಿದ ಪ್ರೇಮಕ್ಕೆ ಕೃತಜ್ಞರಾಗಿ ಅದೇ ಗುಡಿಯಲ್ಲಿಯೇ ಪುರಾಣವನ್ನು ಹೇಳಹತ್ತಿದರು. ಮಹಾರಾಜರೇ ಪುರಾಣ ಶ್ರವಣಕ್ಕೆ ಕುಳಿತುಕೊಳ್ಳಲು, ಆ ಊರ ಜನರಾದರೂ ಆ ಶಾಸ್ತ್ರಿಗಳ ವಿಷಯಕ್ಕಿದ್ದ ದುರಭಿಪ್ರಾಯವನ್ನು ಬಿಟ್ಟು ಪುರಾಣ ಕೇಳಹತ್ತಿದರು. ಈ ಮೇರೆಗೆ ಮಹಾರಾಜರವರು ಅಪಕಾರ ಮಾಡಬಂದ ಶಾಸ್ತ್ರಿಗೆ ಉಪಕಾರ ಮಾಡಿ, ಅವನನ್ನು ಹಾದಿಗೆ ಹಚ್ಚಿದರು. ಸತ್ಪುರುಷರ ಧರ್ಮವೇ ಅಂತಹದು!

ಅನಂತರ ಬ್ರಹ್ಮಾವರ್ತದಲ್ಲಿ ಪ್ಲೇಗವು ಪ್ರಾರಂಭವಾಯಿತು. ಮಹಾರಾಜರು ತಮ್ಮ ಶಿಷ್ಯನಾದ ಅಪ್ಪಾ ಇವನನ್ನು ಹತ್ತರ ಕರೆದು ಅವನಿಗೆ ಮೃತ್ಯುವಿನ ಲಕ್ಷಣಗಳನ್ನೆಲ್ಲ ಹೇಳಿದರು. ಇದರ ಕಾರಣವು ಜನರಿಗೆ ತಿಳಿಯಲಿಲ್ಲ. ಮುಂದೆ ಕೆಲವು ದಿವಸಗಳ ಮೇಲೆ ಅಪ್ಪಾನಿಗೆ ಪ್ಲೇಗವು ಬಂದಿತು. ಆಗ ಮಹಾರಾಜರು ತನಗೆ ಮೃತ್ಯುವಿನ ಲಕ್ಷಣವನ್ನು ಹೇಳಿದ್ದರ ಕಾರಣವು ಅಪ್ಪಾನಿಗೆ ಹೊಳೆದು ತಾನು ಸಾಯುವೆನೆಂದು ಆತನು ತಿಳಕೊಂಡನು. ಪ್ಲೇಗವು ಅವನನ್ನು ನಿರ್ವಿಣ್ಣವಾಗ ಮಾಡಿತು. ಅಪ್ಪಾನು ಸಂನ್ಯಾಸಗ್ರಹಣ ಮಾಡಬೇಕೆಂದು ಬಹು ದಿವಸಗಳಿಂದ ಅಪೇಕ್ಷೆಪಟ್ಟಿದ್ದನು. ತನ್ನ ಈ ಬಯಕೆಯು ನೆರವೇರಲಿಲ್ಲೆಂದು ಅವನು ಒಂದು ದಿನ ಶೋಕ ಮಾಡುತ್ತಿರಲು, ಮಹಾರಾಜರು ಅವನ ಬಳಿಗೆ ಹೋದರು.

ಆಗ ಅಪ್ಪಾಸು ತನ್ನ ಶೋಕದ ಕಾರಣವನ್ನು ಹೇಳಲು, ಮಹಾರಾಜರು ಅವನಿಗೆ ಅಭಯುವನ್ನು ಕೊಟ್ಟು ಸಂನ್ಯಾಸಾಶ್ರಮದ ಪ್ರೇಷೋಚ್ಚಾರ ಮಾಡೆಂದು ಹೇಳಿದರು. ತೃತೀಯ ಪ್ರೇಷೋಚ್ಚಾರದ ಸಂಗಡವೇ ಅಪ್ಪಾನ ಪ್ರಾಣವು ಹೊರಟು ಹೋಗಿ ಬ್ರಹ್ಮೀಭೂತವಾಯಿತು. ಬಳಿಕ ಮಹಾರಾಜರಿಗೆ ಪ್ಲೇಗವು ಬಂದಿತು. ಶಿಷ್ಯರೆಲ್ಲರೂ ಗಾಬರಿಯಾದರು. ಮಹಾರಾಜರ ಕಣ್ಣುಗಳು ಕೆಂಪಗೆ ಆದವು. ಮೈಮೇಲೆ ವಿಪರೀತವಾಗಿ ಜ್ವರ ಬಂದವು ಈ ಬೇನೆಯಿಂದ ಮಹಾರಾಜರು ಉಳಿಯುವರೆಂಬ ಆಶೆಯು ಇಲ್ಲದಂತಾಯಿತು. ಬೇನೆಯು ಇಷ್ಟು ಹೆಚ್ಚಾಗಿದ್ದರೂ ಮಹಾರಾಜರು ತಮ್ಮ ನಿತ್ಯಾಹ್ನಿಕ ಬಿಡಲಿಲ್ಲ. ಕೆಲವು ದಿವಸಗಳ ಮೇಲೆ ಬೇನೆಯು ಹಿಮ್ಮೆಟ್ಟಿ ಅವರಿಗೆ ಗುಣವಾಗುತ್ತ ನಡೆಯಿತು. ಮಹಾರಾಜರಿಗೆ ಪ್ಲೇಗ ಬಂದಬಳಿಕ ಊರೊಳಗೆ ರೋಗವು ಯಾರಿಗೂ ತಟ್ಟಲಿಲ್ಲ. ಊರಲ್ಲಿ ಪ್ಲೇಗವು ಶಾಂತವಾಯಿತು. ಜನರು ತಮ್ಮ ತಮ್ಮ ಮನೆಯನ್ನು ಹೊಂದಿಕೊಂಡರು. ಬಳಿಕ ಮಹಾರಾಜರವರು ಊರವರಿಂದ ದೊಡ್ಡ ಸಮಾರಾಧನೆಯನ್ನು ಮಾಡಿಸಿ, ಸಾವಿರಾರು ಜನ ಬ್ರಾಹ್ಮಣರನ್ನು ತೃಪ್ತಿಗೊಳಿಸಿದರು.

ಮಹಾರಾಜರು ಬ್ರಹ್ಮಾವರ್ತದಲ್ಲಿರುವಾಗ ರತ್ನಾಗಿರಿ ಜಿಲ್ಹೆಯೊಳಗಿನ ವಿಷ್ಣುಪಂತನೆಂಬ ಒಬ್ಬ ಬ್ರಾಹ್ಮಣನು ಸೇವೆಗಾಗಿ ಬಂದನು. ವಿಷ್ಣುಪಂತನು ಇಂಗ್ಲಿಷ ಶಿಕ್ಷಣವನ್ನು ಹೊಂದಿದ್ದು, ಸುಸಂಸ್ಕೃತನಿದ್ದನು. ಅವನು ಸರಾಸರಿ ೩೦ ವರ್ಷದ ಒಳಹೊರಗಿನವನು. ಅವನಿಗೆ ಯಾವ ಕಾರಣದಿಂದಲೋ ವಿರಕ್ತಿಯುಂಟಾಗಿತ್ತು. ಅವನು ಗೃಹದಾರಾದಿಗಳನ್ನು ತ್ಯಜಿಸಿ, ತೀರ್ಥಯಾತ್ರೆಗಳನ್ನು ಮಾಡುತ್ತಿರಲು, ಮಹಾರಾಜರ ಮಹಿಮೆಯನ್ನು ಕೇಳಿ, ಅವರ ಸೇವೆ ಮಾಡಿಕೊಂಡಿರಬೇಕೆಂದು ಬಂದಿದ್ದನು. ಆತನ ವೈರಾಗ್ಯಸಂಪನ್ನತೆಯನ್ನು ನೋಡಿ ಮಹಾರಾಜರು ಆತನನ್ನು ತಮ್ಮ ಬಳಿಯಲ್ಲಿಟ್ಟುಕೊಂಡರು. ವಿಷ್ಣುಪಂತನು ಮಹಾರಾಜರ ಸೇವೆಯನ್ನು ಮಾಡುತ್ತ ಈಶ್ವರ ಭಜನೆಯಲ್ಲಿ ಕಾಲಹರಣ ಮಾಡಹತ್ತಿದನು. ಹೀಗಿರಲು, ಒಂದು ದಿನ ಮಹಾರಾಜರ ಪುರಾಣವು ನಡೆದಾಗ ವಿಷ್ಣು

ಪಂತನ ಲಕ್ಷವು ಸ್ತ್ರೀಯರ ಕಡೆಗೆ ಹೋಗಿ ಚಂಚಲವಾಯಿತು. ಸತ್ಪುರುಷರ ಸನ್ನಿಧಿಯಲ್ಲಿ, ಪುರಾಣ ಶ್ರವಣದಂಥ ಪುಣ್ಯಮಯ ಕಾರ್ಯವು ನಡೆದಿರುವಾಗ, ತನ್ನಿಂದ ಎಂಥ ಅನುಚಿತ ಕೆಲಸವಾಯಿತೆಂದು ಅವನಿಗೆ ತುಂಬಾ ಅನುತಾಪವಾಯಿತು. ಅವನು ಆ ಕೂಡಲೆ ಅಲ್ಲಿಂದ ಹೊರಟು ಅರಣ್ಯವನ್ನು ಹೊಕ್ಕು, ಅಲ್ಲಿ ತನ್ನ ಎರಡೂ ಕಣ್ಣುಗಳೊಳಗೆ ಕಳ್ಳಿಯ ಹಾಲನ್ನು ತುಂಬಿಕೊಂಡನು. ಪಾಪ! ಆ ಪಾಪಭೀರುವು ತನ್ನಿಂದಾದ ಅನುಚಿತ ಕಾರ್ಯಕ್ಕೆ ಶಿಕ್ಷೆಯನ್ನು ಮಾಡಿಕೊಂಡು ಅಂಧನಾದನು. ಕಳ್ಳೀ ಹಾಲಿನ ಪ್ರಖರತೆಗೆ ಕಣ್ಣುಗಳು ಇಂಗಿಹೋಗುವಾಗ ಅವನಿಗೆ ಅತ್ಯಂತ ವೇದನವನ್ನು ಅನುಭವಿಸುವ ಪ್ರಸಂಗ ಬಂದಿತು. ಆದರೂ ಆ ಧೀರನು ಸತ್ವಗೆಡದೆ ಭಗವನ್ನಾಮಸ್ಮರಣೆಯಲ್ಲಿ ನಿಮಗ್ನವಾಗಿರಲು, ಅನ್ನ-ನೀರು ಗಳ್ಳಳಿದೆ, ಅವನ ದೇಹವು ಜರ್ಜರವಾಯಿತು. ಇನ್ನು ಅವನು ಆ ಅಡವಿಯಲ್ಲಿಯೇ ಸಾಯತಕ್ಕವನು, ಅಷ್ಟರಲ್ಲಿ ಕರ್ಮಧರ್ಮಸಂಯೋಗದಿಂದ ಅಲ್ಲಿಗೆ ವನಗಾವಲದ ಸಿಪಾಯಿಯು ಬಂದನು. ಅವನು ವಿಷ್ಣುಪಂತನ ಅತ್ಯವಸ್ಥೆಯನ್ನು ಕಂಡು ಮರುಗಿ, ತನ್ನ ಹತ್ತಿಗಿದ್ದ ಆಲೂಗಡ್ಡೆಗಳನ್ನು ಸುಟ್ಟು ಅವನಿಗೆ ತಿನ್ನಲಿಕ್ಕೆ ಕೊಟ್ಟನು; ಮತ್ತು ಅವನನ್ನು ಕೈಹಿಡಿದು ಕರಕೊಂಡು ಬಂದು ಮಹಾರಾಜರ ಬಳಿಯಲ್ಲಿ ಬಿಟ್ಟನು.

ಮಹಾರಾಜರು ವಿಷ್ಣುಪಂತನ ಸ್ಥಿತಿಯನ್ನು ತಿಳಿದು ಆಶ್ಚರ್ಯಪಟ್ಟು, ಅವನ ವಿರಕ್ತಿಯನ್ನು ಶ್ಲಾಘಿಸಿ, ಅವನಿಗೆ ಔಷಧೋಪಚಾರಗಳನ್ನು ಮಾಡಿದರು. ಅವನ ಕಣ್ಣಿನ ವಿಷಯವಾಗಿ ಮಹಾರಾಜರು ಬಹಳ ಶ್ರಮ ತಕ್ಕೊಂಡರು. ವಿಷ್ಣುಪಂತನ ಕಣ್ಣುಗಳು ಮೊದಲಿನಂತೆ ನೆಟ್ಟಗಾದವು. ಈ ಮಾತಿಗೆ ಕೆಲವು ದಿವಸಗಳು ಕ್ರಮಿಸಿ ಹೋಗಲು, ಒಂದು ದಿನ ಸಾಯಂಕಾಲದಲ್ಲಿ ವಿಷ್ಣುಪಂತನು ನದೀತೀರದಲ್ಲಿ ಅಡ್ಡಾಡುತ್ತಿರುವಾಗ, ಒಂದು ದೊಡ್ಡ ಬಿರುಗಾಳಿಯು ಬೀಸಿ ಅವನ ಕಣ್ಣುಗಳಲ್ಲಿ ಮಳಲು ತುಂಬಿತು. ಅದರಿಂದ ಅವನ ಕಣ್ಣುಗಳು ಕೆಟ್ಟು ನೋವಾದವು. ಆಗ ಮಹಾರಾಜರು ಅವನಿಗೆ ಡಾಕ್ಟರರ ಕಡೆಗೆ ಹೋಗಲು ಅಪ್ಪಣೆಕೊಟ್ಟರು; ಆದರೆ ಅವನ ಸಂಗಡ ಶುಶ್ರೂಷೆಗಾಗಿ ಹೋಗಲು ಯಾರೂ ಸಿಗಲಿಲ್ಲ.

ಅದೇ ಸುಮಾರಕ್ಕೆ ಬೆಳಗಾವೀ ಪ್ರಾಂತದಿಂದ ವೇಂಕಟೇಶನೆಂಬ ೧೪ ವರ್ಷದ ಹುಡುಗನು ಮಹಾರಾಜರ ಸೇವೆಗಾಗಿ ಬಂದಿದ್ದನು. ಮಹಾರಾಜರು ಅವನನ್ನು ಕರೆದು:—"ತಮ್ಮಾ, ನೀನು ವಿಷ್ಣುಪಂತನ ಸಂಗಡ ಕಾನಪುರಕ್ಕೆ ಹೋಗಿ, ಅವನ ಕಣ್ಣುಗಳು ನೆಟ್ಟಗಾಗುವವರೆಗೆ ಅವನ ಸೇವೆಯನ್ನು ಮಾಡಿಕೊಂಡಿರು" ಎಂದು ಹೇಳಿದರು. ಆ ಹುಡುಗನು ಮಹಾರಾಜರ ಈ ಮಾತು ಕೇಳಿ:—"ಸ್ವಾಮಿ, ನಾನು ತಮ್ಮ ಸೇವೆಯನ್ನು ಮಾಡಬೇಕೆಂದು ಮನೆ ಮಾರುಗಳನ್ನು ಬಿಟ್ಟು ಬಂದಿರಲು, ನನ್ನನ್ನು ಒಬ್ಬ ಸಾಮಾನ್ಯ ಮನುಷ್ಯನ ಸೇವೆಗೆ ಕಳಿಸುವಿರಲ್ಲ! ಇದೇ ಏನು ನಿಮ್ಮ ಸತ್ಪುರುಷರ ಧರ್ಮವು? ಎಂದು ನುಡಿದನು, ಆ ಮಾತಿಗೆ ಮಹಾರಾಜರು ನಕ್ಕು:—ತಮ್ಮಾ, ಅನ್ಯಥಾ ತಿಳಕೊಳ್ಳಬೇಡ. ವಿಷ್ಣುಪಂತನ ಸೇವೆಯನ್ನು ಮಾಡಿದರೂ ನಿನಗೆ ನನ್ನ ಸೇವೆಯನ್ನು ಮಾಡಿದ ಫಲವು ಬರುವದು. ವಿಶ್ವಾಸದಿಂದ ವಿಷ್ಣುಪಂತನ ಸಂಗಡ ಹೋಗು; ಎಂದು ಉಪದೇಶ ಮಾಡಿದರು. ಆ ಹುಡುಗನು ಮಹಾರಾಜರ ಮಾತಿನಲ್ಲಿ ವಿಶ್ವಾಸ ತಾಳಿ ವಿಷ್ಣುಪಂತನ ಸಂಗಡ ಕಾನಪುರಕ್ಕೆ ಹೋದನು

ಕಾನಪುರದ ಡಾಕ್ಟರನು ವಿಷ್ಣುಪಂತನ ಕಣ್ಣುಗಳ ಮೇಲೆ ಶಸ್ತ್ರಕ್ರಿಯೆಯನ್ನು ಮಾಡಿ ಕತ್ತಲೆಯ ಕೋಣೆಯಲ್ಲಿ ಮಲಗಿಸಿದನು. ಆ ಕಾಲಕ್ಕೆ ವೇಂಕಟೇಶನು ಒಬ್ಬ ಪರಮಾಪ್ತನಂತೆ ವಿಷ್ಣುಪಂತನ ಸೇವೆಯನ್ನು ಮಾಡಿದನು. ಆ ಹುಡುಗನು ಸುಖ ದುಃಖಗಳ ಪರವಿಯನ್ನು ಬಿಟ್ಟು ಶುಶ್ರೂಷೆಯನ್ನು ಮಾಡಲು ದೈವವಶಾತ್ತಾಗಿ ವಿಷ್ಣುಪಂತನ ಕಣ್ಣುಗಳು ನೆಟ್ಟಗಾದವು. ಬಳಿಕ ವೇಂಟೇಶನು ವಿಷ್ಣುಪಂತನೊಡನೆ ಬ್ರಹ್ಮಾವರ್ತಕ್ಕೆ ಬಂದು ನಡೆದ ಸಂಗತಿಯನ್ನು ಮಹಾರಾಜರ ಮುಂದೆ ನಿವೇದಿಸಿದನು. ಇಂಥ ಏಕನಿಷ್ಠೆಯ ಭಕ್ತರು ಸಿಗುವದು ಅಪರೂಪವೆಂದು ಮಹಾರಾಜರು ಅಂದರು. ಕಾನಪುರದಲ್ಲಿ ವಿಷ್ಣುಪಂತನ ಸೇವೆಯನ್ನು ಮಾಡಿದ ಮಾತ್ರದಿಂದ ಮಹಾರಾಜರ ಪ್ರೇಮವು ಆ ವೇಂಕಟೇಶನ ಮೇಲೆ ವಿಶೇಷವಾಗಿ ಕೂತಿತು. ಅವರು ತಮ್ಮ ಬಳಿಯಲ್ಲಿದ್ದ ೩ ದತ್ತಾತ್ರಯಮೂರ್ತಿಗಳಲ್ಲಿ ಒಂದನ್ನು ಸಾರಂಗಪುರದಲ್ಲಿ ಸ್ಥಾಪಿಸಿದ್ದರು.

ಇನ್ನೊಂದು ಬೆಳ್ಳಿಯ ಸಣ್ಣ ಮೂರ್ತಿಯನ್ನು ಯಾವನಾದರೊಬ್ಬ ಪುಣ್ಯಶಾಲಿಗೆ ಸಮರ್ಪಿಸಿ, ತಾವು ಉಪಾಧಿಯಿಂದ ಮುಕ್ತರಾಗಬೇಕೆಂದು ಯೋಚಿಸುತ್ತಿದ್ದರು; ಆದರೆ ಅವರ ಅಪ್ಪಣೆಯನ್ನು ವಿಶ್ವಾಸದಿಂದ ಅಕ್ಷರಶಃ ಪಾಲಿಸುವಷ್ಟು ಭಾಗ್ಯಶಾಲಿಯಾದ ಪುರುಷನು ಅವರಿಗೆ ಇನ್ನೂ ದೊರಕಿದ್ದಿಲ್ಲ. ಮೇಲೆ ಬರೆದಂತೆ ವೇಂಕಟೇಶನು ಅವರ ಅನುಗ್ರಹಕ್ಕೆ ಪಾತ್ರನಾಗಲು, ಅವರು ಅವನನ್ನು ಹತ್ತಿರ ಕರೆದು:— ತಮ್ಮಾ, ಈ ಪ್ರಾಸಾದಿಕ ಮೂರ್ತಿಯನ್ನು ತಕ್ಕೊ; ನಾನು ಬಹು ದಿವಸಗಳಿಂದ ಈ ಮೂರ್ತಿಯ ಉಪಾಸನೆಯನ್ನು ಮಾಡುತ್ತ ಬಂದಿರುತ್ತೇನೆ. ನಿನ್ನ ಪುಣ್ಯವು ಬಲವತ್ತರವಿದ್ದದರಿಂದ, ಶ್ರೀ ದತ್ತನ ಅನುಗ್ರಹವಾಗಿ, ನಿನಗೆ ಈ ಮೂರ್ತಿಯು ದೊರೆಯುವ ಅಲಭ್ಯಯೋಗವು ಬಂದಿರುತ್ತದೆ. ಇದನ್ನು ನೀನು ತ್ರಿಕಾಲದಲ್ಲೂ ಭಕ್ತಿಯಿಂದ ಪೂಜಿಸು; ಎಂದು ಹೇಳಿ ಆ ಮೂರ್ತಿಯನ್ನು ಅವನ ವಶಕ್ಕೆ ಕೊಟ್ಟರು.

ತಪಗಟ್ಟಲೆ ಸತ್ಪುರುಷರ ಬಳಿಯಲ್ಲಿದ್ದವರಿಗೆ ದೊರೆಯದ ಮೂರ್ತಿಯು, ವೇಂಕಟೇಶನಿಗೆ ಸಿಕ್ಕದ್ದನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟರು. ನಿಜವಾಗಿ ನೋಡಿದರೆ ಅವರ ಈ ಆಶ್ಚರ್ಯಕ್ಕೆ ಆಸ್ಪದವು ಉಳಿಯುವದಿಲ್ಲ. ಯಾಕಂದರೆ, ಸತ್ಪುರುಷರನ್ನು ನೆರಳಿನಂತೆ ಅನುವರ್ತಿಸಿಕೊಂಡಿರುವ ಗುಣವು ಬಹುಜನ ಶಿಷ್ಯರಲ್ಲಿ ಇರುವದಿಲ್ಲ. ಸತ್ಪುರುಷರ ಅಪ್ಪಣೆಯಲ್ಲಿ ತಮಗೆ ಬೇಕಾದದ್ದನ್ನು ಪಾಲಿಸಿ, ಬೇಡಾದದ್ದನ್ನು ಬಿಡುವವರಿಗೆ ಸತ್ಪುರುಷರ ಅನುಗ್ರಹವು ಹ್ಯಾಗೆ ಆಗಬೇಕು? ವೇಂಕಟೇಶನಲ್ಲಿ ಗುರ್ವಾಜ್ಞಾಪಾಲನದ ಗುಣವು ಇದ್ದದರಿಂದಲೇ ತೀವ್ರವಾಗಿ ಆತನು ಮಹಾರಾಜರ ಕೃಪೆಗೆ ಪಾತ್ರನಾದನು. ನಮ್ಮ ಶ್ರೀ ಶೇಷಾಚಲ ಸದ್ಗುರುವಾದರೂ ತನ್ನ ಸುತ್ತಲೂ ಮುತ್ತುವ ಶಿಷ್ಯಸಂಘವನ್ನು ಕುರಿತು:— ಮಹಾರಾಜಾ, ಈ ದೇಹಕ್ಕೆ ಎಣ್ಣೆಯನ್ನು ಹಚ್ಚುವಾಗೂ, ಪಾದಸೇವೆಯನ್ನು ಮಾಡುವಾಗೂ ತೋರಿಸುವಷ್ಟು ಆದರವನ್ನು ಅತಿಥಿಗಳ ಸೇವೆಯಲ್ಲಿ ತೋರಿಸಿರಿ! ನೋಡಿರಿ, ಸ್ವಾಮಿಯ ಸಲುವಾಗಿ ದಿನಾಲು ಎಷ್ಟೋ ಜನರು ಬರುತ್ತಾರೆ. ಅವರಿಗೆ ಅನುಕೂಲ ಮಾಡಿಕೊಡಿರಿ! ಬಿಸಿ ನೀರಿನಿಂದ ಅವರ ಸ್ನಾನ ಮಾಡಿ

ಸಿರಿ! ಅಂದರೆ ಸ್ವಾಮಿಯು ಸಂತೋಷ ಪಡುವನು!! ಎಂದು ಹೇಳುತ್ತಿದ್ದನು. ಸತ್ಪುರುಷರ ಸನ್ನಿಧಿಯಲ್ಲಿ ಹೋಗಿ ಇರುವದು ಹಗರು; ಆದರೆ ಅವರ ಧರ್ಮವನ್ನು ತಿಳಿದು ಸೇವೆ ಮಾಡುವದು ಮಾತ್ರ ಕಠಿಣವು, ಇರಲಿ.

ಬ್ರಹ್ಮಾವರ್ತದಲ್ಲಿ ಮಹಾರಾಜರಿಗೆ ಉಪದ್ರವವು ಬಹಳವಾಗಹತ್ತಿತು. ಯಾರು ಮಂತ್ರ-ತಂತ್ರಗಳಿಗಾಗಿ, ಯಾರು ಪಿಶಾಚಬಾಧೆಯ ನಿವಾರಣಕ್ಕಾಗಿ ಯಾರು, ಔಷಧಕ್ಕಾಗಿ ಪೀಡಿಸಹತ್ತಿದರು. ಇದರಿಂದ ಮಹಾರಾಜರು ಜೇಸತ್ತು ಚಾತುರ್ಮಾಸ್ಯದ ನಿಮಿತ್ತವಾಗಿ ನಾಲ್ಕು ತಿಂಗಳು ಮೌನವ್ರತವನ್ನು ಧರಿಸಿದರು. ಮುಂದೆ ಅವರು ಕಾಶೀ-ಪ್ರಯಾಗಗಳ ಕಡೆಗೆ ಹೋಗಬೇಕೆಂದು ಯತ್ನಿಸಲು, ವಾಡಿಗೆ ಹೋಗಬೇಕೆಂದು ಶ್ರೀದತ್ತಭಗವಾನನ ಅಪ್ಪಣೆಯಾಯಿತು. ಆ ಕಾಲದಲ್ಲಿ ವಾಡಿಯೊಳಗಿನ ಶ್ರೀದತ್ತಪೂಜಾರಿಗಳೆಲ್ಲ ಸ್ವಾರ್ಥಪರವಾಗಿ ಅಧರ್ಮವನ್ನು ಆಚರಿಸತೊಡಗಿದ್ದರು ಮಹಾರಾಜರ ಶಿಷ್ಯರು ಉಪದೇಶ ಮಾಡಹೋಗಲು, ಆ ಲಂಡರು ಇವರನ್ನೇ ಹೊಡೆಯಲಿಕ್ಕೆ ಬಂದರು. ಹೀಗಾಗಿ ವಾಡಿಯಲ್ಲಿ ಅನಾಚಾರವು ಹೆಚ್ಚಾಗಲು ಮಹಾರಾಜರ ಶಿಷ್ಯರು ಸಹ ವಾಡಿಯನ್ನು ಬಿಡುವ ಪ್ರಸಂಗ ಬಂದಿತು. ಆದ್ದರಿಂದ ಶ್ರೀದತ್ತನು ಮಹಾರಾಜರನ್ನೇ ಇಲ್ಲಿಗೆ ಬರಮಾಡಬೇಕೆಂದು ಮಹಾರಾಜರಿಗೆ ಅಪ್ಪಣೆ ಮಾಡಿದನು. ಅಪ್ಪಣೆಯಂತೆ ಅವರು ಬ್ರಹ್ಮಾವರ್ತವನ್ನು ಬಿಟ್ಟು ವಾಡಿಗೆ ಹೊರಟರು. ವಾಡಿಯಲ್ಲಿ ಮಹಾರಾಜರ ಪೂರ್ವಾಶ್ರಮದಲ್ಲಿ ಶಿಷ್ಯನಾಗಿದ್ದ ನಾರಾಯಣ ದೀಕ್ಷಿತನೆಂಬವನು, ಹೆಂಡತಿಯು ಸತ್ತದ್ದರಿಂದ ಸಂನ್ಯಾಸವನ್ನು ಸ್ವೀಕರಿಸಿದ್ದನು. ಅವನಿಗೆ ದಂಡಧಾರಣವು ಆಗದ್ದರಿಂದ, ಈ ಪವಿತ್ರ ಕಾರ್ಯವನ್ನು ಶ್ರೀಗುರುಗಳಿಂದಲೇ ಪೂರ್ಣಮಾಡಿಕೊಳ್ಳಬೇಕೆಂದು ಅವನು ಬ್ರಹ್ಮಾವರ್ತಕ್ಕೆ ಹೊರಟಿದ್ದನು. ಹಾದಿಯಲ್ಲಿ ಮಹಾರಾಜರವರು ಹುಸಂಗಾಬಾದ ಎಂಬಲ್ಲಿ ನಾರಾಯಣ ದೀಕ್ಷಿತನಿಗೆ ದರ್ಶನಕೊಟ್ಟರು. ೧೪ ವರ್ಷಗಳ ವರೆಗೆ ಪರಸ್ಪರರ ದರ್ಶನವಿಲ್ಲದ ಆ ಗುರು-ಶಿಷ್ಯರಿಗೆ ಆದ ಆನಂದವನ್ನು ವರ್ಣಿಸಲಾಸಲ್ಲ. ನಾರಾಯಣ ದೀಕ್ಷಿತನಂಥ ಪ್ರೇಮಲ ಶಿಷ್ಯನನ್ನು ಕಂಡು ಮಹಾರಾಜರ ಶಿಷ್ಯ

ವಾತ್ಸಲ್ಯವು ಉಕ್ಕಿ ಬಂದು, ಅವರು ಅವನನ್ನು ಅಪ್ಪಿಕೊಂಡರು. ಮುಂದೆ ಕೆಲವು ದಿನಗಳ ಮೇಲೆ ಮಹಾರಾಜರು ಶ್ರೀಕ್ಷೇತ್ರ ನರಸೋಬನ ವಾಡಿಗೆ ಬಂದರು.




## ... ರೋಗನಿವಾರಣ.

ಸತ್ಪುರುಷರ ಪ್ರಭಾವವೇ ವಿಚಿತ್ರವಾದದ್ದು; ಅಂತೆಯೇ ಅವರು ಈಶ್ವರೀ ವಿಭೂತಿಗಳೆಂದು ತಿಳಿಯಲ್ಪಡುತ್ತಾರೆ. ಹಿಂದಿನ ಪ್ರಕರಣದಲ್ಲಿ ಹೇಳಿದಂತೆ ಮಹಾರಾಜರು ವಾಡಿಗೆ ಬರಲು, ಅಲ್ಲಿಯ ಎಲ್ಲ ಜನರೂ ಎಚ್ಚತ್ತರು. ಮಹಾರಾಜರು ಮೊಟ್ಟಮೊದಲು ಗುಡಿಗೆ ಹೋಗಿ ಶ್ರೀ ಗುರುವಿನ ದರ್ಶನ ತಕ್ಕೊಂಡು ಬ್ರಹ್ಮಾನಂದ ಸ್ವಾಮಿಗಳ ಮಠದ ಮೇಲುಪ್ಪರಿಗೆಯಲ್ಲಿ ಇಳಿದುಕೊಂಡರು. ಮಧ್ಯಾಹ್ನದ ವರೆಗೆ ಜನರು ದರ್ಶನಕ್ಕೆ ಬರುತ್ತಲೇ ಇದ್ದರು. ಅನೀತಿಯ ಜನರನ್ನು ಕಂಡರೆ ಮಹಾರಾಜರು ಸೇರುತ್ತಿದ್ದಿಲ್ಲ. ಆದ್ದರಿಂದ ಅವರ ದರ್ಶನಕ್ಕೆ ಬರಬೇಕಾದರೆ ಜನರು ಬಹಳ ಎಚ್ಚರದಿಂದ ಬರಬೇಕಾಗುತ್ತಿತ್ತು. ವಾಡಿಯಲ್ಲಿ ಪೂಜಾರಿಗಳು ಅವಿಚಾರಿಗಳಾಗಿರುವರೆಂದೂ ಅವರನ್ನು ನೀವು ಎಚ್ಚರಗೊಳಿಸಬೇಕೆಂದೂ ಬ್ರಹ್ಮಾವರ್ತದಲ್ಲಿದ್ದಾಗ ಮಹಾರಾಜರಿಗೆ ಶ್ರೀಗುರುವು ಹೇಳಿದ್ದನ್ನು ವಾಚಕರು ಹಿಂದಿನ ಪ್ರಕರಣದಲ್ಲಿಯೇ ಓದಿ ತಿಳಿದಿರುವರು. ಶ್ರೀಗುರುವಿನ ಅಪ್ಪಣೆಯಂತೆ ವರ್ತಿಸಲು ಮಹಾರಾಜರು ಈಗ ಸಮಯವನ್ನು ಕಾಯುತ್ತಿರಲು, ಒಂದು ದಿನ ಅವರಿಗೆ ಅಕಸ್ಮಾತ್ತಾಗಿ ಸಮಾಧಿಯು ಹತ್ತಿತು, ಆಗ ಮಹಾರಾಜರು ಶ್ರೀಗುರುವಿನ ಪಲ್ಲಕ್ಕಿಯ ಸೇವೆಗಾಗಿ ಹೊರಟಿದ್ದರು. ಮೇಲೆ ಹೇಳಿದಂತೆ ಸಮಾಧಿಯು ಹತ್ತಿರಲು, ಅವರು ತಿರುಗಿ ಗುಡಿಗೆ ಬಂದು ಕುಳಿತು ಎಲ್ಲ ಪೂಜಾರಿಗಳಿಗೂ ಬರಹೇಳಿದರು. ಪೂಜಾರಿಗಳು ಅಂಜುತ್ತಂಜುತ್ತ ಮಹಾರಾಜರ ಬಳಿಯಲ್ಲಿ ಬಂದು ನಿಂತರು. ಪೂಜಾರಿಗಳಲ್ಲಿ ಪ್ರಮುಖರೆಲ್ಲರೂ ಬಂದರೆಂಬದನ್ನು ಕೇಳಿದ

ಬಳಿಕ, ಮಹಾರಾಜರು ಸಮಾಧಿಸ್ಥಿತಿಯಲ್ಲಿಯೇ ಗಂಭೀರವಾದ ವಾ
ಯಿಂದ ನುಡಿದರೇನಂದರೆ:--"ನೀವು ನಿಮ್ಮ ಪೂರ್ವಜರ ಆಚರಣೆಗಳನ್ನು
ಸಂಪೂರ್ಣವಾಗಿ ಮರೆತು ಬಿಟ್ಟಿರುತ್ತೀರಿ. ಇದರಿಂದ ನಿಮ್ಮ ಮ
ತನಕ್ಕೆ ಕ್ಷೇಮವಾಗದು. ಇನ್ನು ಮುಂದೆಯಾದರೂ ನೀವು ಬ್ರಾಹ್ಮಣ
ಧರ್ಮದಂತೆ ಆಚರಿಸದಿದ್ದರೆ, ಮೂರು ವರ್ಷಗಳ ಹಿಂದೆ ಅನುಭವಿಸಿ
ಶಿಕ್ಷೆಯನ್ನೇ ನೀವು ಈಗ ಪುನಃ ಅನುಭವಿಸಬೇಕಾಗುವದು."

ಈ ಮೇರೆಗೆ ಮಹಾರಾಜರ ಮುಖದಿಂದ ಹೊರಟ ಶಬ್ದಗಳನ್ನು
ಕೇಳಿ ಪೂಜಾರಿಗಳೆಲ್ಲರೂ ಭಯಗ್ರಸ್ತರಾದರು. ಅವರು ಮಹಾರಾಜರ
ಚರಣಗಳನ್ನು ಗಟ್ಟಿಯಾಗಿ ಹಿಡಿದು, ಕ್ಷಮೆಯನ್ನು ಬೇಡಿಕೊಳ್ಳಹತ್ತಿ
ದರು. ಮಹಾರಾಜರು ಸಮಾಧಿಯನ್ನು ಇಳಿಸಿ, ಅವರಿಗೆ ಧರ್ಮೋಪ
ದೇಶವನ್ನು ಮಾಡಿದರು. ಬಳಿಕ ಪೂಜಾರಿಗಳು ಮಹಾರಾಜರ ಅಪ್ಪ
ಣೆಯ ಪ್ರಕಾರ ಶ್ರೀ ಗುರುವಿಗೆ ಎರಡು ಸಾರೆ ಮಹಾರುದ್ರಾಭಿಷೇಕವನ್ನು
ಮಾಡಿಸಿದರು. ಶ್ರೀ ಗುರುವಿನ ಸಂತೋಷಾರ್ಥವಾಗಿ ಬ್ರಾಹ್ಮಣಸಂ
ರ್ಪಣೆಯನ್ನು ಮಾಡಿದರು. ಅವರು ತಮ್ಮತಮ್ಮೊಳಗಿನ ಬಡಿದಾಟಗಳ
ಬಿಟ್ಟುಬಿಟ್ಟರು. ದೇವರ ಪೂಜೆಯಿಂದ ಸಂಪತ್ತನ್ನು ಸಂಪಾದಿಸುವ
ಅವರ ದುರಾಶೆಯೂ ಅಳಿದು ಹೋಯಿತು. ಅವರು ವಿವೇಕಿಗಳಾಗಿ
ಮಹಾರಾಜರ ಆಜ್ಞೆಯಂತೆ ವರ್ತಿಸಹತ್ತಿದರು. ಆಗ ಮಹಾರಾಜರಿಗೆ
ಪರಮಸಂತೋಷವಾಯಿತು. ಪೂಜಾರಿಗಳು ಉಪದೇಶಕ್ಕೆ ಅರ್ಹ
ರೆಂದು ತೋರಿದ ಬಳಿಕ, ಮಹಾರಾಜರು ಅವರಿಗೆ ದಶೋಪನಿಷತ್ತು
ಗಳನ್ನು ಶ್ರವಣ ಮಾಡಿಸಿದರು. ವಾಡಿಯಲ್ಲಿ ಪ್ರತಿನಿತ್ಯ ಭಜನೆ-ಪುರಾಣ-
ನಾಮಸಂಕೀರ್ತನ-ಗುರುಚರಿತ್ರೆಯ ಪಾರಾಯಣ ಇವೇ ಮೊದಲಾದವು
ಗಳು ನಡೆಯತೊಡಗಿದವು. ಜನರ ದುಷ್ಟಾಲೋಚನೆಗಳಿಗೆ ಆಸ್ಪದವೇ
ಉಳಿಯುತ್ತಿದ್ದಿಲ್ಲ. ಈ ಪ್ರಕಾರ ವಾಡಿಯು ಸದ್ಧರ್ಮಮಯವಾಗಲು
ತಾವು ಬಂದ ಕೆಲಸವು ಆಯಿತೆಂದು ತಿಳಿದು, ಮಹಾರಾಜರು ಬೇರೆ ಕಡೆಗೆ
ಹೋಗುವ ಆಲೋಚನೆಯನ್ನು ಮಾಡಿದರು; ಆದರೆ ವಾಡಿಯ ನಿವಾಸಿ
ಗಳು ಮಹಾರಾಜರನ್ನು ಹಲವು ಬಗೆಯಾಗಿ ಪ್ರಾರ್ಥಿಸಿ ಮುಂದೆ ಕೆಲವು

ದಿವಸಗಳ ವರೆಗೆ ಅವರನ್ನು ಇಟ್ಟುಕೊಂಡರು, ಮಹಾರಾಜರಾದರೂ ಒಮ್ಮೆಲೆ ಅವರ ಮನಸ್ಸನ್ನು ನೋಯಿಸಲಾಗದೆಂದು ಮತ್ತೆ ಕೆಲವು ದಿವಸ ವಾಡಿಯಲ್ಲಿದ್ದರು.

ಮಹಾರಾಜರು ವಾಡಿಯಲ್ಲಿರುವಾಗ 'ಕೌಡಾಗುಲದ' ಎಂಬಲ್ಲಿಯ ಒಬ್ಬ ಗೃಹಸ್ಥನು ಪತ್ನೀಸಮೇತನಾಗಿ ದರ್ಶನಾಪೇಕ್ಷೆಯಿಂದ ಬಂದನು. ದರ್ಶನವಾದ ಬಳಿಕ ಅವನು ಒಂದು ದಿನ ಮಹಾರಾಜರನ್ನು ಕುರಿತು:— ನುಡಿದನೇನಂದರೆ: "ಸ್ವಾಮಿ ಮಹಾರಾಜ, ತಮ್ಮ ಅಪ್ಪಣೆಯ ಮೇರೆಗೆ ಈಕೆಯನ್ನು ಲಗ್ನವಾದೆನು; ಆದರೆ ಈಕೆಗೆ ೪೨ ವರ್ಷಗಳು ತುಂಬುತ್ತ ಬಂದರೂ ಸಂತತಿಯಾಗಲಿಲ್ಲ." ಮಹಾರಾಜರು ಅವನ ಮಾತುಗಳನ್ನು ಕೇಳಿ ನಕ್ಕು, ಅವನ ಜನ್ಮಪತ್ರಿಕೆಯನ್ನು ನೋಡಿ ನಿನಗೆ ಈ ಸ್ತ್ರೀಯಿಂದ ಸಂತತಿಯಾಗುವದಿಲ್ಲೆಂದು ಹೇಳಿದರು; ಆದರೆ ಆ ಗೃಹಸ್ಥನು ನಿಷ್ಠುರನಾದ್ದರಿಂದ, ಅವನು ಮಹಾರಾಜರನ್ನು ಕುರಿತು:— ನೀವು ಜ್ಞಾನಿಗಳು; ಸಮರ್ಥರು; ಹೀಗಿದ್ದು ಇಂಥ ಬಂಜೆ ಸ್ತ್ರೀಯನ್ನು ನನಗೇಕೆ ಲಗ್ನಮಾಡಿದಿರಿ? ಎಂದು ನುಡಿಯಲು, ಮಹಾರಾಜರು ಅವನಿಗೆ ಸಮಾಧಾನವನ್ನು ಹೇಳಿ, ನೀವು ಅನುಷ್ಠಾನವನ್ನು ಮಾಡಿದರೆ, ದತ್ತಕೃಪೆಯಿಂದ ನಿಮಗೆ ಸಂತಾನವಾಗುವದೆಂದು ಪ್ರಸಾದವನ್ನು ಕೊಟ್ಟರು. ಆ ಗೃಹಸ್ಥನು ಮಹಾರಾಜರ ಅಪ್ಪಣೆಯನ್ನು ಪಡೆದು ತನ್ನ ಊರಿಗೆ ಹೊರಟನು. ಹಾದಿಯಲ್ಲಿ ಅವನು ಒಂದು ಊರಲ್ಲಿ ವಸತಿಯನ್ನು ಮಾಡಿರಲು, ಆ ಊರಲ್ಲಿ ಮಹಾರಾಜರ ಫೋಟೋಗಳು ಮಾರಲಿಕ್ಕೆ ಸಿಗುವವೆಂಬ ಸುದ್ದಿಯು ಅವನಿಗೆ ಹತ್ತಿತು. ಆಗ ಅವನು ಉಪಾಧ್ಯಾಯನನ್ನು ಪೇಟೆಗೆ ಕಳುಹಿಸಿ ಒಂದು ಫೋಟೋ ತರಿಸಿದನು; ಆದರೆ ಆ ಉಪಾಧ್ಯಾಯನು ತಂದ ಫೋಟೋದ ಮಾದರಿಯು ಅವನ ಮನಸ್ಸಿಗೆ ಬಾರದ್ದರಿಂದ, ಅದನ್ನು ಕೊಟ್ಟು ಮತ್ತೊಂದನ್ನು ತರಲು ಪುನಃ ಉಪಾಧ್ಯಾಯನನ್ನು ಕಳಿಸಿದನು. ಆ ದಿನ ರಾತ್ರಿಯಲ್ಲಿ ಆ ದಂಪತಿಗಳ ಸ್ವಪ್ನದಲ್ಲಿ ಮಹಾರಾಜರು ಬಂದು:- "ನಿಮಗೆ ನನ್ನ ರೂಪವು ಮನಸ್ಸಿಗೆ ಬಂದಂತೆ ಕಾಣಲಿಲ್ಲ; ಆದ್ದರಿಂದ ನಾನು ಕೊಟ್ಟ ಪ್ರಸಾದವಾದರೂ ನಿಮ್ಮ ಬಳಿಯಲ್ಲಿ ಯಾಕೆ ಇರಬೇಕು?

ಎಂದು ನುಡಿದರು. ಮರುದಿನ ಆ ದಂಪತಿಗಳು ಎದ್ದು ಇಬ್ಬರಿಗೂ ಒಂದೇ ಸ್ವಪ್ನ ಬಿದ್ದದ್ದನ್ನು ತಿಳಿದು ಆಶ್ಚರ್ಯಪಟ್ಟು, ಮಹಾರಾಜರು ಕೊಟ್ಟ ಪ್ರಸಾದವನ್ನು ನೋಡಲು, ಅದು ಇದ್ದಿಲ್ಲ. ಆಗ ಆ ದಂಪತಿಗಳು ಗಾಬರಿಯಾಗಿ ನರಸೋಬನವಾಡಿಗೆ ಬಂದು, ನಡೆದ ಸಂಗತಿಯನ್ನು ಮಹಾರಾಜರಿಗೆ ನಿವೇದಿಸಿ ಕ್ಷಮೆಯನ್ನು ಬೇಡಿಕೊಂಡರು. ಅವರ ದೈನ್ಯವೃತ್ತಿಯನ್ನು ನೋಡಿ, ಮಹಾರಾಜರಿಗೆ ಕರುಣೆ ಹುಟ್ಟಿ, ಪುನಃ ಅವರಿಗೆ ಪ್ರಸಾದವನ್ನು ಕೊಟ್ಟರು. ಮಹಾರಾಜರ ಅನುಗ್ರಹದಿಂದ ಆ ದಂಪತಿಗಳಿಗೆ ಒಂದು ಗಂಡೂ, ಒಂದು ಹೆಣ್ಣೂ ಹುಟ್ಟಿ ಅವರ ಮನಸ್ಸಿನ ಬಯಕೆಯು ಪೂರ್ಣವಾಯಿತು.

ಮುಂದೆ ಕೆಲವು ದಿವಸಗಳ ಮೇಲೆ ಮಹಾರಾಜರು ವಾಡಿಯನ್ನು ಬಿಟ್ಟು ಹೊರಟರು. ಅವರು ನೆಟ್ಟಗೆ ಗಾಣಗಾಪುರಕ್ಕೆ ಹೋದರು. ಅಲ್ಲಿ ಅವರಿಗೆ ಶ್ರೀದತ್ತನ ದರ್ಶನವಾಗಲಿಲ್ಲ "ಮಠದಲ್ಲಿ ಅನಾಚಾರವು ಹೆಚ್ಚಾದ್ದರಿಂದ ನಾನು ಸಂಗಮಕ್ಕೆ ಹೋಗಿರುತ್ತೇನೆ"ಂದು ಮಹಾರಾಜರಿಗೆ ದೃಷ್ಟಾಂತವಾಯಿತು. ಅದರಂತೆ ಮಹಾರಾಜರು ಸಂಗಮಕ್ಕೆ ಹೋಗಲು, ಅಲ್ಲಿ ಶ್ರೀದತ್ತನ ದರ್ಶನವಾಯಿತು. ಮಹಾರಾಜರು ಅಲ್ಲಿ ಕೆಲವು ದಿವಸಗಳ ವರೆಗೆ ಇದ್ದು, ಅಲ್ಲಿಂದ ಹೊರಟರು. 'ಖರಸಾಡ' ಎಂಬಲ್ಲಿ ಒಬ್ಬ ಗೃಹಸ್ಥನು ಘನತರವಾದ ವ್ಯಾಧಿಯಿಂದ ಬಳಲುತ್ತ ತೀರ ಮರಣೋನ್ಮುಖನಾಗಿದ್ದನು. ಅವನ ಮನೆಯವರು ಮಹಾರಾಜರನ್ನು ಬಹು ವಿಧವಾಗಿ ಪ್ರಾರ್ಥಿಸಿ, ಒಂದು ಯಂತ್ರವನ್ನು ಮಾಡಿಸಿಕೊಂಡು ಒಯ್ದು ಅವನಿಗೆ ಕಟ್ಟಿದರು. ಆ ಯಂತ್ರಸಾಮರ್ಥ್ಯದಿಂದ ಅವನ ರೋಗ ನಿವಾರಣೆಯಾಗಿ, ಅವನು ಎದ್ದು ಓಡಾಡ ಹತ್ತಿದನು ಮಹಾರಾಜರ ಈ ಸಾಮರ್ಥ್ಯವನ್ನು ನೋಡಿ, ಜನರು ಬಹು ವಿಸ್ಮಯಪಟ್ಟರು. ಮಹಾರಾಜರು ನರಸೀಪುರದಲ್ಲಿರುವಾಗ ಒಬ್ಬ ಬಣಜಿಗನು ಅವರ ಕಡೆಗೆ ಬಂದನು. ಆ ಬಣಜಿಗನಿಗೆ ಅರದಲೆಶೂಲಿಯು ಪ್ರಾಚೀನ ಕರ್ಮದಿಂದ ಗಂಟು ಬಿದ್ದಿತ್ತು. ಅವನು ಅದನ್ನು ಕಳಕೊಳ್ಳುವ ಬಗ್ಗೆ ಅನೇಕ ಉಪಾಯಗಳನ್ನು ಮಾಡಿದನು; ಆದರೆ ಆ ರೋಗವೇನೂ ಕಡಿಮೆಯಾಗ

ಲಿಲ್ಲ. ೩-೪ ವರ್ಷಗಟ್ಟಲೆ ಆ ವ್ಯಾಧಿಯನ್ನು ಭೋಗಿಸಿ-ಭೋಗಿಸಿ ಆ ಬಣಜಿಗನು ಹಣ್ಣಾದನು. ಮಾಡತಕ್ಕ ಉಪಾಯಗಳೆಲ್ಲ ನಿಂತಬಳಿಕ ಆ ಬಣಜಿಗನಿಗೆ ಅತ್ಯಂತ ವ್ಯಸನವಾಯಿತು. ಅವನು ನನ್ನ ಬೇನೆಯನ್ನು ಯಾರು ಕಳೆದಾರೆಂದು ಹಗಲಿರುಳು ಚಿಂತಿಸುತ್ತಿದ್ದನು. ಹೀಗಿರಲು, ಮಹಾರಾಜರು ಆ ಊರಿಗೆ ಅಕಸ್ಮಾತ್ತಾಗಿ ಬರಲು, ಆ ಬಣಜಿಗನು ಮೇಲೆ ಹೇಳಿದಂತೆ ಮಹಾರಾಜರ ದರ್ಶನಕ್ಕೆ ಬಂದನು. ಆಗ ಮಹಾರಾಜರು ಬಣಜಿಗನ ವಿನಂತಿಯನ್ನು ಕೇಳಿ:—"ನಾನು ವೈದ್ಯನಲ್ಲ, ಡಾಕ್ಟರನಲ್ಲ, ಇದಕ್ಕೆ ನಾನು ಏನು ಹೇಳಲಿ? ಎಂದು ಅಂದರು. ಬಣಜಿಗನು ತನ್ನ ದುರ್ದೈವವನ್ನು ಹಳಿಯುತ್ತ ಮನೆಗೆ ಹೋದನು; ಆದರೆ ಅವನು ದಿನಾಲು ಮಹಾರಾಜರ ದರ್ಶನಕ್ಕೆ ಬರುವದನ್ನು ಬಿಡಲಿಲ್ಲ. ಅವನು ಅವರ ಸಂಗಡ ನದಿಗೆ ಸ್ನಾನಕ್ಕೆ ಹೋಗುತ್ತಿದ್ದನು. ಬರುವಾಗ ಅವರ ಸಂಗಡ ಬರುತ್ತಿದ್ದನು. ಹೀಗೆ ಎಂಟು ದಿವಸಗಳ ವರೆಗೆ ಮಾಡಲು, ಮಹಾರಾಜರಿಗೆ ದಯವು ಹುಟ್ಟಿತು. ಆಗ ಅವರು ಅವನನ್ನು ಹತ್ತರ ಕರೆದು:—ಅಪ್ಪಾ ಬಣಜಿಗನೇ, ಸುಮ್ಮನೆ ನಮ್ಮ ಬೆನ್ನು ಹತ್ತಿ ಯಾಕೆ ತಿರುಗುವೆ? ಅದರಿಂದ ನಿನಗಾಗುವ ಪ್ರಯೋಜನವೇನು? ಎಂದು ಕೇಳಿದರು. ಅದಕ್ಕೆ ಬಣಜಿಗನು:—ಸ್ವಾಮಿಾ, ನಾನು ಈ ಬೇನೆಯ ಕಾಲೊಳಗೆ ಬಹಳ ಬೇಸತ್ತಿದ್ದೇನೆ, ನೆಟ್ಟಗಾದರೆ ನಿಮ್ಮ ಸೇವೆಯಿಂದ ಆಗಬೇಕು. ಆಗದಿದ್ದರೆ ನೆಟ್ಟಗಾಗುವದಿಲ್ಲೆಂದು ನಿಶ್ಚಯ ಮಾಡಿದ್ದೇನೆ, ಎಂದು ನುಡಿದನು. ಆಗ ಮಹಾರಾಜರು ಅವನಿಗೆ ಅಲ್ಲಿಯೇ ಎದುರಿಗೆ ಕಾಣುವ ಒಂದು ಗಿಡದ ತೊಪ್ಪಲವನ್ನು ತರಹೇಳಿದರು ಅವನು ಅದರಂತೆ ತಂದನು. ಆ ತೊಪ್ಪಲದ ರಸದಲ್ಲಿ ಹೆಂಗಸರ ಮೊಲೆಯ ಹಾಲನ್ನು ಕೂಡಿಸಿ ನೆತ್ತಿಗೆ ಹಾಕಿಕೊಳ್ಳೆಂದು ಅವನಿಗೆ ಹೇಳಿ, ಅಪ್ಪಣೆ ಕೊಟ್ಟು ಮಹಾರಾಜರು ಆಶ್ರಮಕ್ಕೆ ಹೊರಟು ಹೋದರು. ಆ ಬಣಜಿಗನು ಮಹಾರಾಜರು ಹೇಳಿದಂತೆ ಆ ದಿವಸ ಮಾಡಲು, ಅವನ ಶಿರೋವ್ಯಾಧಿಯು ಅರ್ಧ-ಮರ್ಧ ಕಡಿಮೆಯಾದಂತಾಯಿತು. ಮರುದಿನ ಅವನು ಮಹಾರಾಜರಿಗೆ ಭೆಟ್ಟಿಯಾಗಿ ಬೇನೆಯು ಕಡಿಮೆಯಾದದ್ದನ್ನು ಹೇಳಿದನು.

ಅದಕ್ಕೆ ಮಹಾರಾಜರು:--ಅಪ್ಪಾ, ನಿನ್ನ ಪೂರ್ವದ ಪುಣ್ಯದಿಂದ ಬೇ
ಯು ಕಡಿಮೆಯಾಗುವದು. ಈವೊತ್ತು ಒಂದು ದಿನ ನಾನು ಹೇಳಿ
ಉಪಾಯವನ್ನು ಮಾಡು, ಎಂದು ಹೇಳಿ ಅವನನ್ನು ಕಳಿಸಿದರು.
ಬಣಜಿಗನ ರೋಗವು ಎರಡೇ ದಿನಗಳಲ್ಲಿ ನಾಮಶೇಷವಾಯಿತು. ಇದಕ್ಕೆ
ಔಷಧದ ಪ್ರಭಾವವೆನ್ನಬೇಕೋ, ಅಥವಾ ಸತ್ಪುರುಷರ ತಪಃಪ್ರಭಾ
ವೆನ್ನಬೇಕೋ ತಿಳಿಯದು!

ಈ ಮೇರೆಗೆ ಮಹಾರಾಜರ ಕೃಪೆಯಿಂದ ಎಷ್ಟೋ ಜನರು ಹಲವು
ಬಗೆಯ ರೋಗಗಳಿಂದ ಮುಕ್ತರಾದರು. ಹೊಟ್ಟೆನೋವಿನಿಂದ ಬಳಲು
ವವರೂ, ಪಾಂಡುರೋಗದವರೂ, ಕ್ಷಯವುಳ್ಳವರೂ ಮಹಾರಾಜರ
ಉಪಾಯಗಳಿಂದ ನಿರಾಮಯರಾದರು. ಹೀಗೆ ರೋಗ ನಿವಾರಣೆಯ ಬಗ್ಗೆ
ಮಹಾರಾಜರ ಕೀರ್ತಿಯು ಹಬ್ಬಲು, ಒಬ್ಬ ಕುತ್ಸಿತನು ಕ್ಷುದ್ರ ಕಲ್ಪನೆ
ಯನ್ನು ಮಾಡಿಕೊಂಡು ಮಹಾರಾಜರ ಬಳಿಗೆ ಬಂದನು. ಅವನು ಮಹಾ
ರಾಜರನ್ನು ಪರೀಕ್ಷಿಸಬೇಕೆಂದು ಏನೂ ರೋಗವಿಲ್ಲದೆ ಸುಮ್ಮ ಸುಮ್ಮನೆ
ಮಹಾರಾಜರಿಗೆ ಕೈಯನ್ನು ತೋರಿಸಿ: - ಸ್ವಾಮಿ, ನನ್ನ ಕೈಯು ವಾಯು
ವಿಕಾರದಿಂದ ನಡುಗುತ್ತಲಿದೆ. ಇದಕ್ಕೇನಾದರೂ ಉಪಾಯವನ್ನು ಹೇಳ
ಬೇಕು, ಎಂದು ಕೇಳಿಕೊಂಡನು. ಮಹಾರಾಜರು ವಾಯು ವಿಕಾರವು
ಕಡಿಮೆಯಾಗಲಿಕ್ಕೆ ಇಂಥ ಉಪಾಯವನ್ನು ಮಾಡೆಂದು ಹೇಳಿದರು.
ಆಗ ಆ ಗೃಹಸ್ಥನು:—ಮಹಾರಾಜರಿಗೆ ಏನೂ ತಿಳಿಯುವದಿಲ್ಲ; ಇವರು
ಸುಮ್ಮನೆ ಡಂಭ ತೋರಿಸುತ್ತಾರೆ, ಎಂದು ನಿಂದೆಯನ್ನು ಮಾಡಲು
ಕ್ರಮಿಸಿದನು; ಆದರೆ ಆ ಸತ್ಪುರುಷರ ನಿಂದೆಯ ಫಲವು ಆಗಲೆ ಅವನ
ಉಡಿಯಲ್ಲಿ ಕಟ್ಟಿತು. ಅವನು ನಿರ್ನಿಮಿತ್ತವಾಗಿ ಯಾವ ಕೈಯನ್ನು
ಮಹಾರಾಜರಿಗೆ ತೋರಿಸಿದ್ದನೋ, ಅದೇ ಕೈಗೆ ಗಲಿತಕುಷ್ಟರೋಗವು
ಹತ್ತಿ, ಅವನು ಆ ರೋಗದಿಂದ ಕೊಳೆತು-ಕೊಳೆತು ಮೃತಪಟ್ಟನು.
ಸತ್ಪುರುಷರ ಉಪಹಾಸವನ್ನು ಮಾಡಲಾಗದು!

ಮಹಾರಾಜರು ಕಮಲಾಪುರದ ಧರ್ಮಶಾಲೆಯಲ್ಲಿ ಒಂದು ದಿನ
ವಸ್ತಿಯನ್ನು ಮಾಡಿರಲು, ರಾತ್ರಿಯಲ್ಲಿ ಅವರ ಸ್ವಪ್ನದೊಳಗೆ ಒಬ್ಬ

ತೇಜಃಪುಂಜ ಪುರುಷನು ಬಂದು: - ನೀವು ಎಲ್ಲ ಕಡೆಗೂ ಸಂಚಾರ ಮಾಡುತ್ತೀರಿ, ಕವಿತ್ವ ಶಕ್ತಿಯು ನಿಮ್ಮಲ್ಲಿ ಉಂಟು; ಹೀಗಿದ್ದು ನೀವು ನಮ್ಮ ಕಡೆಗೆ ಒಂದಾವರ್ತಿಯಾದರೂ ಬರದೇ ಇರುವದು ಪ್ರಶಸ್ತವಾದದ್ದಲ್ಲವೆ''ಂದು ನುಡಿದು ಅದೃಶ್ಯನಾದನು. ಮಹಾರಾಜರಿಗೆ ಕೂಡಲೆ ಎಚ್ಚರವಾಯಿತು. ಅವರು ಸ್ವಪ್ನದ ಸಂಗತಿಯನ್ನು ತಿಳಿದು, ಆ ತೇಜಃಪುಂಜ ಪುರುಷನು ಯಾರು? ಎಂಬದನ್ನು ಗೊತ್ತುಹಚ್ಚುವದಕ್ಕಾಗಿ ಸಮಾಧಿಯನ್ನು ಏರಿಸಿದರು. ಯೋಗ ಸಾಮರ್ಥ್ಯದಿಂದ ಅವರಿಗೆ ಆ ತೇಜಃಪುಂಜ ಪುರುಷನು ಅಕ್ಕಲಕೋಟೀ ಸ್ವಾಮಿಮಹಾರಾಜನೆಂತಲೂ, ತಮ್ಮ ಚರಿತ್ರವು ಕವಿತಾರೂಪದಿಂದ ಪ್ರಸಿದ್ಧವಾಗಬೇಕೆಂಬ ಅಪೇಕ್ಷೆಯು ಅವರಲ್ಲಿ ಉಂಟೆಂತಲೂ ತಿಳಿದು ಬಂತು. ಆಗ ಮಹಾರಾಜರು ಉಪಾಸ್ಯದೇವತೆಯನ್ನು ವಿಚಾರಿಸಲು, ಶ್ರೀದತ್ತನು ಅವರಿಗೆ ಅಕ್ಕಲಕೋಟೀ ಸ್ವಾಮಿಯ ಚರಿತ್ರವನ್ನು ರಚಿಸಲು ಅಪ್ಪಣೆ ಕೊಟ್ಟನು. ಮುಂದೆ ಮಹಾರಾಜರು ಅಕ್ಕಲಕೋಟೆಗೆ ಹೋಗಿ ಸ್ವಾಮಿಗಳ ದರ್ಶನ ತಕ್ಕೊಂಡು, ಅವರ ಇಚ್ಛೆಯನ್ನು ಪೂರ್ಣಮಾಡಿದರು.

ಬಳಿಕ ಮಹಾರಾಜರು ದೇಶಸಂಚಾರ ಮಾಡುತ್ತಿರಲು, 'ಗೋತೋಸ' ಎಂಬ ಊರಿನ ಜನಾರ್ದನಪಂತನೆಂಬ ಒಬ್ಬ ಬ್ರಾಹ್ಮಣನು ಪಿಶಾಚ ಬಾಧೆಯಿಂದ ಪೀಡಿತನಾಗಿ ಮಹಾರಾಜರ ಬಳಿಗೆ ಬಂದನು. ಅವನು ಮಹಾರಾಜರನ್ನು ಕಂಡು ಭಕ್ತಿಪೂರ್ವಕವಾಗಿ ನಮಿಸಿ: ಸ್ವಾಮಿ, ನಮ್ಮ ಅಜ್ಜಂದಿರು ಇರುವಾಗ ನಮ್ಮ ಮನೆಗೆ ಒಬ್ಬ ಬ್ರಾಹ್ಮಣನು ಊಟಕ್ಕೆ ಬಂದಿದ್ದನು. ಅವನು ಹೋಗುವಾಗ ಅಜ್ಜನ ಕೈಯಲ್ಲಿ ೩೨ ರೂಪಾಯಿಗಳನ್ನು ಕೊಟ್ಟು, ನಾನು ಇನ್ನೊಮ್ಮೆ ನಿಮ್ಮ ಬಳಿಗೆ ಬಂದಾಗ ಈ ರೂಪಾಯಿಗಳನ್ನು ನನಗೆ ಕೊಡಬೇಕೆಂದು ಹೇಳಿದನು. ತಿರುಗಿ ಎಷ್ಟೋ ವರ್ಷಗಳಾದರೂ ಅವನು ನಮ್ಮ ಮನೆಗೆ ಬರಲಿಲ್ಲ. ನಮ್ಮ ಅಜ್ಜಂದಿರು ಸಾಯುವ ಕಾಲಕ್ಕೆ ಆ ರೂಪಾಯಿಗಳ ಸಂಗತಿಯನ್ನು ನಮ್ಮ ಮುಂದೆ ಹೇಳಿ ಪ್ರಾಣಬಿಟ್ಟರು. ನಮಗೆ ಆ ಬ್ರಾಹ್ಮಣನ ಊರುಕೇರಿಗಳು ಗೊತ್ತಿಲ್ಲದ್ದರಿಂದ, ಆ ಧನವು ನಮ್ಮಲ್ಲಿಯೇ ಉಳಿಯಿತು.

ಆ ಬ್ರಾಹ್ಮಣನು ಕಾಲವಶನಾಗಿ ಈಗ ಪಿಶಾಚರೂಪದಿಂದ ನನ್ನನ್ನು ಕಾಡಹತ್ತಿರುವನು. ಆ ಪಿಶಾಚದ ಹೇಳಿಕೆಯಂತೆ ಆ ರೂಪಾಯಿಗಳನ್ನು ವೆಚ್ಚಮಾಡಿ 'ನಾರಾಯಣಬಲಿ''ಯನ್ನು ಮಾಡಿದ್ದೇನೆ; ಆದರೂ ನನಗೆ ಆ ಬಾಧೆಯು ಕಡಿಮೆಯಾಗಿಲ್ಲ. ನಿಮ್ಮ ಬಳಿಗೆ ಶರಣು ಬಂದಿದ್ದೇನೆ. ಬಡವನನ್ನು ಉದ್ಧರಿಸಬೇಕು, ಎಂದು ಬೇಡಿಕೊಂಡನು. ಆಗ ಮಹಾರಾಜರು ಆ ಪಿಶಾಚವನ್ನು ಆ ಬ್ರಾಹ್ಮಣನ ಮೈಮೇಲೆ ಬರಮಾಡಿ, ಅದರ ಮುಖದಿಂದ ಈ ಸಂಗತಿಯು ಸತ್ಯವೋ ಅಸತ್ಯವೋ ಎಂಬದನ್ನು ಕೇಳಿಕೊಂಡರು. ಪಿಶಾಚವು ಈ ಸಂಗತಿಯು ನಿಜವೆಂದು ಒಪ್ಪಿಕೊಂಡಿತು. ಬಳಿಕ ಮಹಾರಾಜರು ಆ ಪಿಶಾಚವನ್ನು ಕುರಿತು:— ಹೀಗಿದ್ದು ಈ ಬ್ರಾಹ್ಮಣನನ್ನು ಯಾಕೆ ಕಾಡುವೆ? ಎಂದು ಕೇಳಿದರು. ಅದಕ್ಕೆ ಪಿಶಾಚವು:-ಮಹಾರಾಜ, ನನಗೆ ಸದ್ಗತಿಯನ್ನು ಕೊಡಲು ನಮ್ಮ ವಂಶದಲ್ಲಿ ಯಾರೂ ಇಲ್ಲ. ಈ ಬ್ರಾಹ್ಮಣನ ಕಡೆಯಿಂದ ನಿಮ್ಮ ಸಮಕ್ಷಮ ಇನ್ನೊಮ್ಮೆ ನಾರಾಯಣಬಲಿಯನ್ನು ಮಾಡಿಸಿ, ನನಗೆ ಸದ್ಗತಿಯಾಗುವಂತೆ ಮಾಡಬೇಕು, ಎಂದು ಪ್ರಾರ್ಥಿಸಿತು. ಮಹಾರಾಜರು ಆ ಪಿಶಾಚವನ್ನು ಸದ್ಗತಿಗೆ ಮುಟ್ಟಿಸುವದಕ್ಕಾಗಿ ಆ ಬ್ರಾಹ್ಮಣನಿಂದ ನಾರಾಯಣಬಲಿಯನ್ನು ಮಾಡಿಸಿದರು. ಪಿಶಾಚವು ಉದ್ಧೃತವಾಗಿ ಹೋಯಿತು ಬ್ರಾಹ್ಮಣನು ಸಂತುಷ್ಟನಾಗಿ ನಿಶ್ಚಿಂತೆಯಿಂದ ಮನೆಗೆ ಹೊರಟು ಹೋದನು.

ಈ ರೀತಿಯಾಗಿ ಮಹಾರಾಜರು ಲೋಕೋಪಕಾರವನ್ನು ಮಾಡುತ್ತಿರಲು, ಎಷ್ಟೋ ಜನರಿಗೆ ಅದು ಸಹನವಾಗುತ್ತಿರಲಿಲ್ಲ. ಒಬ್ಬನು ಮಹಾರಾಜರಿಗೆ ಒಂದು ಪತ್ರವನ್ನು ಬರೆದು, ನಿಮಗೆ ಇಂಥ ಬಣ ಉಸಾಬರಿಗಳು ಯಾಕೆ ಬೇಕೆಂದು ಕೇಳಿದ್ದನಂತೆ! ಯಾವ ಕಾಲದಲ್ಲಾದರೂ ಸತ್ಪುರುಷರಿಗೆ ನಿಂದಕರು ಇದ್ದೇ ಇರುವರು. ಪ್ರಸಂಗ ಬಂದಬಳಿಕ ಈ ನಿಂದಕರೇ ಸತ್ಪುರುಷರಿಗೆ ಶರಣು ಹೋಗಿ ಅವರ ಕೃಪೆಗೆ ಪಾತ್ರರಾಗುವರು. ಅದರಂತೆ ಆ ಪತ್ರ ಬರೆದವನು ತನಗೇ ಅಸಾಧ್ಯರೋಗವು ಗಂಟು ಬೀಳಲು, ಉಪಾಯವಿಲ್ಲದೆ ಮಹಾರಾಜರಿಗೆ ಶರಣು ಹೋಗಿ,

ಗುಣವನ್ನು ಹೊಂದಿದನು. ದೀಪಾವಳಿಯ ಹಬ್ಬವು ಮುಗಿದ ಬಳಿಕ ಮಹಾರಾಜರು ಹುಸಂಗಾಬಾದಿಗೆ ಹೋದರು. ಅಲ್ಲಿ ಇವರ ಎಷ್ಟೋ ಜನ ಶಿಷ್ಯರು ಬಂದು, ದರ್ಶನ ತಕ್ಕೊಂಡು ಧನ್ಯತೆಯನ್ನು ಪ್ರಕಟಿಸಿದರು. ಆ ಊರಲ್ಲಿದ್ದ ಎಷ್ಟೋ ಜನ ರೋಗಿಗಳು ರೋಗಮುಕ್ತರಾದರು. ದತ್ತಜಯಂತಿಯು ಸಮೀಪಕ್ಕೆ ಬಂದದ್ದರಿಂದ, ಅಲ್ಲಿಯ ಜನರು ಮಹಾರಾಜರನ್ನು ಪ್ರಾರ್ಥಿಸಿ, ಜಯಂತಿಯ ವರೆಗೆ ಅವರನ್ನು ಇಟ್ಟುಕೊಂಡರು. ಮಹಾರಾಜರು ಪರಮ ಪ್ರೀತಿಯಿಂದ ಆ ಜನರ ಸೇವೆಯನ್ನು ಕೈಕೊಂಡು ಜಯಂತಿಯ ಮರುದಿನ ಅಲ್ಲಿಂದ ಪ್ರಯಾಣ ಬೆಳಸಿದರು.

ಮಹಾರಾಜರ ವೃತ್ತಿಯು ವಿಲಕ್ಷಣವಾದ್ದರಿಂದ ಅವರು ಇಂಥಲ್ಲಿಗೇ ಹೋಗಬೇಕೆಂದು ಎಂದೂ ಸಂಕಲ್ಪ ಮಾಡುತ್ತಿರಲಿಲ್ಲ. ಅವರು ಊರಬಿಟ್ಟು ಹೊರಟ ಬಳಿಕ ಹಾದಿಯಲ್ಲಿ ಯಾವ ದಿಕ್ಕಿಗೆ ಹೋಗಬೇಕೆಂಬ ಬುದ್ಧಿಯು ಹುಟ್ಟುವದೋ, ಆ ದಿಕ್ಕಿಗೆ ಹೋಗಿಬಿಡುತ್ತಿದ್ದರು. ಅದರಂತೆ ಹುಸಂಗಾಬಾದಿನಿಂದ ಹೊರಡುವಾಗ, ಅವರು ಎಲ್ಲಿಗೆ ಹೋಗಬೇಕೆಂಬದನ್ನು ನಿಶ್ಚಯಿಸಿದ್ದಿಲ್ಲ. ಕೆಲವು ಹಾದಿಯನ್ನು ನಡೆದ ಬಳಿಕ, ಕಾಶೀಯಾತ್ರೆಗೆ ಹೋಗುವ ಕೆಲವು ಜನರು ಅವರಿಗೆ ಕೂಡಿದರು. ಮಹಾರಾಜರೂ ಆ ಜನರ ಸಂಗಡ ಕಾಶಿಗೆ ಹೋದರು. ಅವರು ಕಾಶೀಕ್ಷೇತ್ರದಲ್ಲಿ 'ತಾರಕ' ಮಠದಲ್ಲಿ ಇಳಿದುಕೊಂಡರು. ಅಲ್ಲಿ ಸ್ವಯಂಪ್ರಕಾಶ ಸ್ವಾಮಿಗಳು ಇರುತ್ತಿದ್ದರು. ಅವರು ಮಹಾರಾಜರನ್ನು ಕಂಡು ಬಹಳ ಸಂತೋಷಬಟ್ಟರು. ಬಳಿಕ ಮಹಾರಾಜರು ಪಂಚಕ್ರೋಶ ಯಾತ್ರೆಗಳನ್ನು ಮಾಡಲು ಹೊರಟರು. ಸಂಗಡ ಯಾತ್ರಾಜನರು ಇದ್ದೇ ಇದ್ದರು. ಮಹಾರಾಜರು ರಾಮೇಶ್ವರಕ್ಕೆ ಬರಲು, ಅಲ್ಲಿ ಅವರಿಗೆ ಒಂದು ದೃಷ್ಟಾಂತವಾಯಿತು. ಶ್ರಾದ್ಧಾನ್ನವನ್ನು ಉಣ್ಣುವದಕ್ಕಾಗಿಯೇ ನೀವು ಈ ಯಾತ್ರಿಕರ ಬೆನ್ನು ಹತ್ತಿರುವಿರೇನೆಂದು ಶ್ರೀದತ್ತಾತ್ರಯನು ಸ್ವಪ್ನದಲ್ಲಿ ಮಾಡಿದ ಪ್ರಶ್ನೆಯಿಂದ ಮಹಾರಾಜರು ಎಚ್ಚತ್ತರು. ಆಗ ಅವರು ಸಂಗಡ ಬಂದವರನ್ನು ವಿಚಾರಿಸಲು, ಯಾತ್ರಿಕರು ಶ್ರಾದ್ಧವನ್ನು ಮಾಡದೆ ಮೊದಲು ಮಹಾರಾಜರಿಗೆ ಭಿಕ್ಷೆಯ ಹಾಕು

ತ್ತಿದ್ದರೆಂದು ಗೊತ್ತಾಯಿತು. ಪ್ರತಿನಿತ್ಯ ಶ್ರಾದ್ಧದ ಊಟವನ್ನು ಉಂಡದ್ದಕ್ಕೆ ಮಹಾರಾಜರು ಪಶ್ಚಾತ್ತಾಪ ರೂಪವಾದ ಪ್ರಾಯಶ್ಚಿತ್ತವನ್ನು ತಕ್ಕೊಂಡು ಯಾತ್ರಿಕರಿಗೆ ಹೀಗೆ ಇನ್ನೊಮ್ಮೆ ಮಾಡಲಾಗದೆಂದು ಕಟ್ಟಪ್ಪಣೆ ಮಾಡಿದರು ಪಂಚಕ್ರೋಶ ಯಾತ್ರೆಯು ಸಂಪೂರ್ಣವಾಗಲು, ಮಹಾರಾಜರು ಎಲ್ಲ ಯಾತ್ರಿಕರನ್ನು ಬಿಟ್ಟು ದಕ್ಷಿಣಕ್ಕೆ ಹೊರಟರು. ಅವರು ಹಾದಿಯಲ್ಲಿ ಒಂದು ದಿನ ನರ್ಮದಾತೀರಕ್ಕೆ ಬಂದು ವಸತಿಯನ್ನು ಮಾಡಿದರು. ಅಲ್ಲಿ ನಾನಾಶಾಸ್ತ್ರಿ ಎಂಬೊಬ್ಬ ಬ್ರಹ್ಮಾವರ್ತದ ಶಿಷ್ಯನು ಮಹಾರಾಜರಿಗೆ ಕೂಡಿದನು. ಅವನು ಸಕುಟುಂಬವಾಗಿ ತೀರ್ಥಯಾತ್ರೆಗಳಿಗೆ ಹೊರಟಿರಲು, ನರ್ಮದಾತೀರದಲ್ಲಿ ಇಳಕೊಂಡಾಗ್ಗೆ ಆತನಿಗೆ ಮಾರಿಕಾ ಬೇನೆಯು ಬಂದಿತು. ಶಿಷ್ಯನ ಈ ಆಪತ್ತನ್ನು ನೋಡಿ, ಮಹಾರಾಜರಿಗೆ ಕರುಣೆ ಹುಟ್ಟಿತು. ಶಿಷ್ಯನು ಸುರಕ್ಷಿತವಾಗಿ ಹೆಂಡಿರು-ಮಕ್ಕಳೊಡನೆ ಊರಿಗೆ ಮುಟ್ಟುವದಕ್ಕಾಗಿ ಅವರು ಶ್ರೀ ದತ್ತಾತ್ರಯನನ್ನು ಪ್ರಾರ್ಥಿಸಿದರು. ಮಹಾರಾಜರ ಈ ಪ್ರಾರ್ಥನೆಯಿಂದ ನಾನಾಶಾಸ್ತ್ರಿಗೆ ಗುಣಮುಖವಾಯಿತು. ಅವನು ಮಹಾರಾಜರ ಅಪ್ಪಣೆಯನ್ನು ಪಡೆದು, ಸುರಕ್ಷಿತವಾಗಿ ತಮ್ಮ ಊರಿಗೆ ಹೊರಟು ಹೋದನು.

ಮಹಾರಾಜರು ನರ್ಮದಾ ತೀರದಲ್ಲಿ ಇರುವಾಗ ಒಂದು ಊರಿಗೆ ಮಧ್ಯಾಹ್ನದಲ್ಲಿ ಭಿಕ್ಷೆಗೆ ಹೋದರು. ಆ ಊರಲ್ಲಿ ಒಂದೇ ಬ್ರಾಹ್ಮಣರ ಮನೆಯಿದ್ದು, ಆ ಮನೆಯು ಸ್ಥಿತಿಗತಿಯಾದರೂ ವಿಲಕ್ಷಣವಾದದಿದ್ದಿತ್ತು. ಪುಣೆಯ ಕಡೆಯ ಒಬ್ಬ ಬ್ರಾಹ್ಮಣನು, ಲಗ್ನವಾಗಿದ್ದ ತನ್ನ ಮಗಳನ್ನು ಕರಕೊಂಡು ನರ್ಮದಾ ತೀರಕ್ಕೆ ಹೋಗಿ, ಮೇಲೆ ಹೇಳಿದ ಹಳ್ಳಿಯಲ್ಲಿ ಒಬ್ಬ ಸಂಪತ್ತುಳ್ಳ ಬ್ರಾಹ್ಮಣನಿಗೆ ಕೊಟ್ಟು ಪುನಃ ಲಗ್ನ ಮಾಡಿದ್ದನು. ಆ ಹುಡುಗಿಯು ಎರಡನೇ ಗಂಡನ ಕೂಡ ಸಂಸಾರ ಮಾಡುತ್ತಿರಲು, ದೈವಯೋಗದಿಂದ ಅವನು ಸತ್ತನು. ಇಷ್ಟು ಹೊತ್ತಿಗೆ ಆ ಹುಡುಗೆಗೆ ಮೊದಲು ಲಗ್ನವಾಗಿತ್ತೆಂಬ ಸುದ್ದಿಯು ಜನರಲ್ಲಿ ಹಬ್ಬಿದ್ದರಿಂದ ಅಲ್ಲಿಯ ಕೆಲವು ಕುಚೇಷ್ಟೆಕಾರರು ಆ ಹುಡುಗೆಯ ಮೊದಲನೇ ಗಂಡನಿಗೆ ಈ ಸಂಗತಿಯನ್ನು ತಿಳಿಸಿದ್ದರು. ಆ ಹುಡುಗೆಯ ಮೊದಲನೇ ಗಂಡನು

ಬಂದು ಅವನು ಇದರ ಬಗ್ಗೆ ಅನರ್ಥವನ್ನು ನಡಿಸಿರುವಾಗ, ಮಹಾರಾಜರು ಆ ಊರಿಗೆ ಭಿಕ್ಷೆಗೆ ಹೋದರು. ಮೇಲೆ ಹೇಳಿದ ಈ ಸುದ್ದಿಯು ಮಹಾರಾಜರಿಗೆ ಹತ್ತಲು, ಅವರು ಎರಡೂ ಕಿವಿಗಳ ಮೇಲೆ ಕೈಯನ್ನಿಟ್ಟುಕೊಂಡು ಕಲಿಯುಗದಲ್ಲಿ ಬ್ರಾಹ್ಮಣ್ಯವು ಹಾಳಾಯಿತೆಂದು ಅನ್ನುತ್ತ ಆ ಊರ ಅಗಸೆಯಿಂದಲೇ ಹಿಂದಿರುಗಿದರು. ಆಗ ಸುಮಾರು ಆರು ತಾಸು ಆಗಿರಬಹುದು; ಅಷ್ಟು ಹೊತ್ತಿನಲ್ಲಿ ಅವರು ಭಿಕ್ಷೆಯಿಲ್ಲದೆ ಮತ್ತೊಂದು ಊರಿಗೆ ಹೋಗುವದು ಬಹಳ ಕಷ್ಟವಾಯಿತು. ಅವರು ಬಿಸಿಲಿನ ತಾಪದಿಂದ ಕಂಗೆಟ್ಟು ಒಂದು ಗಿಡದ ಬುಡಕ್ಕೆ ಬಂದು ಕುಳಿತುಕೊಳ್ಳಲು, ದನಕಾಯುವ ಒಂದು ಹುಡುಗೆಯು ಮಹಾರಾಜರ ಸಮೀಪಕ್ಕೆ ಬಂದು: ಸ್ವಾಮೀ, ನೀವು ಇನ್ನೂ ಉಂಡಂತೆ ಕಾಣುವದಿಲ್ಲವಲ್ಲವೆಂದು ಕೇಳಿತು. ಅದಕ್ಕೆ ಮಹಾರಾಜರು ತಮ್ಮ ಸಂಗತಿಯನ್ನೆಲ್ಲ ಹೇಳಿದರು. ಆಗ ಆ ಹುಡುಗೆಯು:— ಹಾಗಾದರೆ ಸ್ವಾಮೀ, ಈ ನದಿಯ ದಂಡೆ ಹಿಡಿದು ಒಂದು ಮೈಲು ಹೋದರೆ ಒಂದು ಊರು ಹತ್ತುವದು. ಆ ಊರಲ್ಲಿ ಬ್ರಾಹ್ಮಣರ ಮನೆಗಳು ಬಹಳ ಅವೆ. ಅಲ್ಲಿ ನಿಮ್ಮ ಕೆಲಸವಾಗಬಹುದು, ಎಂದು ಹೇಳಿತು. ಮಹಾರಾಜರು ಆ ಹುಡುಗೆಗೆ ಕಲ್ಯಾಣವಾಗಲೆಂದು ಹರಿಸಿ, ಮುಂದಕೆ ಹೋಗಿ ಹೊರಳಿ ನೋಡಲು, ಆ ಹುಡುಗೆಯು ಇದ್ದಿಲ್ಲ. ಆಗ ಮಹಾರಾಜರು ಈಶೇಚ್ಛೆಗೆ ಆಶ್ಚರ್ಯಪಡುತ್ತ, ಮುಂದಿನ ಗ್ರಾಮಕ್ಕೆ ಹೊರಟು ಹೋದರು.

ಹೋದ ಹೋದಲ್ಲಿ ಜನರ ರೋಗನಿವಾರಣೆ ಮಾಡುವದೊಂದು ಮಹಾರಾಜರಿಗೆ ಮುಖ್ಯ ಕರ್ತವ್ಯವಾಗಿ ಹೋಗಿತ್ತು. ಪಿಶಾಚಗಳನ್ನು ಬಿಡಿಸುವದಂತೂ ಮಹಾರಾಜರ ಕೊರಳಿಗೆ ಗಂಟೇ ಬಿದ್ದಂತಾಗಿತ್ತು. ಸನಗಾ ಎಂಬ ಊರಲ್ಲಿ ಮಹಾರಾಜರು ಮೂರು ಜನರ ಪಿಶಾಚಿಗಳನ್ನು ಬಿಡಿಸಿದರು. ಇಬ್ಬರ ಮಹಾರೋಗ ನಿವಾರಣೆ ಮಾಡಿದರು. ಮಹಾರಾಜರು "ನರಸಿ"ಯಲ್ಲಿ ಇರುವಾಗ ಸಂಕೇಶ್ವರದ ದತ್ತೋಪಂತರ ಕುಟುಂಬದ ಪಿಶಾಚ ಬಾಧೆಯನ್ನೂ, ಸಬನೀಸ ವಕೀಲರ ತಮ್ಮನ ಅಪಸ್ಮಾರ ರೋಗವನ್ನೂ, ಬಾಪೂ ಅಘೂವಾಲೆ ಎಂಬವರ ಚಿರಂಜೀವನ

ಅತಿಸಾರ ಬೇನೆಯನ್ನೂ ಅಲ್ಪಾವಕಾಶದಲ್ಲಿ ಕಡಿಮೆ ಮಾಡಿ, ತಮ್ಮ ಅಗಾಧ ಸಾಮರ್ಥ್ಯವನ್ನು ಪ್ರಕಟಗೊಳಿಸಿದರು.

---

## ಕರ್ನಾಟಕಕ್ಕೆ ಆಗಮನವೂ-ಸತ್ಪುರುಷರ ದರ್ಶನವೂ.

ಈ ಮೇರೆಗೆ ಶ್ರೀ ಟೇಂಬೇ ಮಹಾರಾಜರವರು ಲೋಕಾನುಗ್ರಹ ಕಾಂಕ್ಷಿಗಳಾಗಿ ಸಂಚರಿಸುತ್ತಿರಲು, ಅವರು ತಮ್ಮ ಆಯುಷ್ಯದ ಕೊನೆಯ ಭಾಗದಲ್ಲಿ ಕರ್ನಾಟಕ ಪ್ರಾಂತಕ್ಕೆ ದಯಮಾಡಿಸಿದರು. ಇಷ್ಟು ದಿವಸ ಗಳಲ್ಲಾದ ಅವರ ದೇಶಸಂಚಾರವು ಉತ್ತರ ದಿಕ್ಕಿನಲ್ಲಿಯೇ ಆದಂತಾಗಿತ್ತು. ಅವರು ದಕ್ಷಿಣ ನಿಟ್ಟಿಗೆ ಅಂದರೆ, ನಮ್ಮ ಕರ್ನಾಟಕಕ್ಕೆ ಬಂದದ್ದು ಇದೇ ಮೊದಲು; ಈ ಮಹಾತ್ಮರು ತಮ್ಮ ಆಗಮನದಿಂದ ಕರ್ನಾಟಕದಲ್ಲಿಯ ಹಲವು ಜನರಿಗೆ ಸಂತೋಷವನ್ನುಂಟು ಮಾಡಿದರು. ಇವರ ತಪಃಪ್ರಭಾ ವಕ್ಕೆ ನಮ್ಮ ಕರ್ನಾಟಕವು ದಂಗು ಬಡಿದು ಹೋಯಿತು. ಇರಲಿ; ಮಹಾರಾಜರು ನರ್ಮದಾ ತೀರದಿಂದ ಶ್ರೀ ನರಸೋಬನವಾಡಿಗೆ ಬಂದು, ಅಲ್ಲಿ ಶ್ರೀ ಗುರುವಿನ ದರ್ಶನವನ್ನು ಹೊಂದಿ, ಬೆಳಗಾವಿಗೆ ಬಂದರು; ಬೆಳಗಾವಿಯ ಜನರು ಈ ಮಹಾತ್ಮರ ಪ್ರಖ್ಯಾತಿಯನ್ನು ಕರ್ಣೋಪಕರ್ಣ ವಾಗಿ ಕೇಳಿದ್ದರು. ಆದ್ದರಿಂದ ಅವರು ಮಹಾರಾಜರಲ್ಲಿ ವಿಶ್ವಾಸವುಳ್ಳವ ರಾಗಿ ಅವರ ಆದರಾತಿಥ್ಯಗಳನ್ನು ಚೆನ್ನಾಗಿ ಮಾಡಿದರು. ಭಾವಿಕರಾದ ಎಷ್ಟೋ ಜನರು ಮಹಾರಾಜರ ನಾಮಗಾನವನ್ನು ಮಾಡಿದರು. ಹೀಗೆ ಬೆಳಗಾವಿಯ ಭಕ್ತಮಂಡಲಿಯು ತಮ್ಮ ಆನಂದವನ್ನು ವ್ಯಕ್ತಗೊಳಿಸಲು, ಮಹಾರಾಜರು ಅಲ್ಲಿಂದ ಹೊರಟು ಶ್ರೀ ಕ್ಷೇತ್ರ ಗುರ್ಲಹೊಸೂರಿಗೆ ಬಂದರು. ಈ ಕ್ಷೇತ್ರವು ಬೆಳಗಾವೀ ಜಿಲ್ಲೆಯ ಸವದತ್ತಿ ತಾಲೂಕಿನಲ್ಲಿ ರುತ್ತದೆ. ಈ ಕ್ಷೇತ್ರದಲ್ಲಿ ನೂರಾರು ವರ್ಷಗಳಾಚೆಯಲ್ಲಿ ಆಗಿಹೋದ ಮಹಾತ್ಮನಾದ ಶ್ರೀ ಚಿದಂಬರೇಶನ ಗುಡಿಯು ಇದ್ದು, ಮಲಪ್ರಭಾ ತೀರ ದಲ್ಲಿ ಇದೊಂದು ಸುಪ್ರಸಿದ್ಧವಾದ ಸ್ಥಳವಾಗಿರುವದು. ಮಹಾರಾಜರು ಗುರ್ಲಹೊಸೂರಿಗೆ ಬರಲು, ಅಲ್ಲಿ ಶ್ರೀ ಚಿದಂಬರೇಶ್ವರನ ಸೇವೆಗಾಗಿ

ಇದ್ದ ಶ್ರೀಮತ್ ಪರಮಹಂಸ ಕೈವಲ್ಯಸ್ವಾಮಿಗಳು ಉರ್ಫ ಶ್ರೀ ಬೋಕೇ ಸ್ವಾಮಿಗಳು ಅವರನ್ನು ಬಹಳವಾಗಿ ಆದರಿಸಿದರು. ಶ್ರೀ ಬೋಕೇ ಸ್ವಾಮಿಗಳ ಯೋಗ್ಯತೆಯನ್ನು ನಮ್ಮ ಕರ್ನಾಟಕಸ್ಥರಲ್ಲಿ ಬಹು ಜನರು ಬಲ್ಲರು. ಸಮಾನ ಗುಣಧರ್ಮದವರಿಗೆ ಸ್ನೇಹವು ಬಹು ಬೇಗ ಕೂಡುವದೆಂಬದು ವಾಡಿಕೆಯಾಗಿರುವದಷ್ಟೇ; ಅದರಂತೆ ನಮ್ಮ ಮಹಾರಾಜರಿಗೂ, ಬೋಕೇ ಸ್ವಾಮಿಗಳಿಗೂ ಸಖ್ಯವು ಬಹು ಬೇಗ ಕೂಡಿತು. ಮಹಾರಾಜರು ಗುಲ-ಹೊಸೂರಲ್ಲಿ ೧೦ ದಿವಸಗಳ ವರೆಗೆ ಇದ್ದರು. ದಿನಾಲು ಇವರಿಬ್ಬರ ನಡುವೆ ವೇದಾಂತ ವಿಷಯದ ಮೇಲೆ ಹಲವು ಚರ್ಚೆಗಳಾಗುತ್ತಿದ್ದವು. ಮಹಾತ್ಮರೂ, ಭಗವದ್ಭಕ್ತರೂ ಆದ ಈ ಇಬ್ಬರು ಸತ್ಪುರುಷರ ಸಮ್ಮೇಲನವು ಅಪೂರ್ವವೆಂತಲೇ ಹೇಳಬಹುದು.

ಬಳಿಕ ಮಹಾರಾಜರವರು ಶ್ರೀ ಬೋಕೇ ಸ್ವಾಮಿಗಳ ಅಪ್ಪಣೆಯನ್ನು ತೆಗೆದುಕೊಂಡು ಶ್ರೀ ರೇಣುಕಾಕ್ಷೇತ್ರಕ್ಕೆ ಅಂದರೆ, ಯಲ್ಲಮ್ಮನ ಗುಡ್ಡಕ್ಕೆ ಬಂದರು. ಅಲ್ಲಿ ಅವರು ದೇವಿಯ ದರ್ಶನವನ್ನು ಹೊಂದಿ, ಸಂಚಾರ ಮಾಡುತ್ತ ಧಾರವಾಡಕ್ಕೆ ಬಂದು ಮುಟ್ಟಿದರು. ಇಂಥ ದೊಡ್ಡ ಸತ್ಪುರುಷರು ತಮ್ಮ ಊರಿಗೆ ಬಂದದ್ದು ಅಲಭ್ಯಲಾಭವೆಂದು ತಿಳಿದು, ಧಾರವಾಡದ ನಿವಾಸಿಗಳಲ್ಲಿ ಅನೇಕರು ಮಹಾರಾಜರ ಸನ್ಮಾನವನ್ನು ಬಹು ಆದರಪೂರ್ವಕವಾಗಿ ಮಾಡಿದರು. ಮುಂದೆ ಚಾತುರ್ಮಾಸ್ಯವು ಸಮೀಪಿಸಿದ್ದರಿಂದ ತುಂಗಾತೀರದಲ್ಲಿ ಈ ಸಾರೆಯ ಚಾತುರ್ಮಾಸ್ಯವನು ಕಳೆಯಬೇಕೆಂದು ಮಹಾರಾಜರು ಯೋಚಿಸಿದರು. ಆಗ ಅವರಿಗೆ ತುಂಗಾತೀರದಲ್ಲಿದ್ದ ಹಾವನೂರೆಂಬ ಗ್ರಾಮವು ಪ್ರಶಸ್ತವಾಗಿ ತೋರಿತು. ಹಾವನೂರ ಗ್ರಾಮವು ಧಾರವಾಡದಿಂದ ಆಗ್ನೆಯ ದಿಕ್ಕಿಗೆ ಬಹು ದೂರದಲ್ಲಿರುತ್ತದೆ. ಮಹಾರಾಜರು ನಿರಾಲೋಚನೆಯಿಂದ ಹಾವನೂರ ಕಡೆಗೆ ಸಾಗಿದರು. ಹಾದಿಯಲ್ಲಿ ಅವರಿಗೆ ಅಗಡಿಯ ಸುಪ್ರಸಿದ್ಧ ಸಾಧುಗಳಾದ ಶ್ರೀ ಶೇಷಾಚಲ ಸದ್ಗುರುಗಳವರ ಆನಂದವನವೆಂಬ ಪುಣ್ಯಭೂಮಿಯು ಹತ್ತಿತು. ಮಹಾರಾಜರವರು ಒಂದು ದಿನ ಸಾಯಂಕಾಲದ ೫ ಗಂಟೆಯ ಸುಮಾರಕ್ಕೆ ಆನಂದವನವನ್ನು ಪ್ರವೇಶ ಮಾಡಿ

ದರು. ಶ್ರೀ ಸಾಧುಗಳವರ ಶಿಷ್ಯರು ಮಹಾರಾಜರನ್ನು ಸನ್ಮಾನಿಸಿ ಅವರಿಗೆ ಆನಂದವನವನ್ನೆಲ್ಲ ತೋರಿಸಿದರು. ಇವರು ಟೇಂಬೇಮಹಾರಾಜರೆಂಬದು ಆನಂದವನದವರಿಗೆ ಗೊತ್ತಿಲ್ಲವಿದ್ದರೂ, ಅವರು ತಮ್ಮ ಸ್ವಾಭಾವಿಕ ಧರ್ಮದಂತೆ ಮಹಾರಾಜರ ಆತಿಥ್ಯವನ್ನು ಮಾಡಿದರು. ಮಹಾರಾಜರು ಅಂದಿನ ರಾತ್ರಿಯನ್ನು ಆನಂದವನದ ಪುಣ್ಯ ಭೂಮಿಯಲ್ಲಿ ಕಳೆದು, ಮರುದಿನ ಪ್ರಾತರ್ವಿಧಿಗಳನ್ನು ತೀರಿಸಿಕೊಂಡು ಹಾವನೂರಿಗೆ ನಡೆದರು.

ಹಾವನೂರಿಗೆ ಮುಟ್ಟಿದ ಬಳಿಕ ಚಾತುರ್ಮಾಸ್ಯದ ವಿಧಾನಗಳು ತೀರುವ ವರೆಗೆ ಮಹಾರಾಜರು ಅಲ್ಲಿ ಇರಬೇಕಾಯಿತೆಂಬದು ಸಹಜವು. ಹಾವನೂರವು ಒಂದು ಸರ್ವಸಾಧಾರಣ ಊರು ಆಗಿದ್ದರೂ ಮಹಾರಾಜರ ಯೋಗದಿಂದ ಅದು ಈ ಅವಧಿಯಲ್ಲಿ ಒಂದು ಸುಪ್ರಸಿದ್ಧವಾದ ಸ್ಥಳದಂತೆ ಗೌರವವನ್ನು ಹೊಂದಿತು. ಮಹಾರಾಜರ ಪ್ರಸಿದ್ಧಿಯನ್ನು ಕೇಳಿ, ಕರ್ನಾಟಕದ ಬೇರೆ ಬೇರೆ ಸ್ಥಳಗಳಿಂದ ಜನರು ಹಾವನೂರಿಗೆ ಬರಹತ್ತಿದರು. ಇದಲ್ಲದೆ ಉತ್ತರ ಸೀಮೆಯು ಜನರು ಮಹಾರಾಜರನ್ನು ಹುಡುಕುತ್ತ ಹಾವನೂರಿಗೆ ಬಂದು ಜನಸಮ್ಮರ್ದವನ್ನು ಹೆಚ್ಚಿಸುತ್ತಿದ್ದರು. ರೋಗಾರ್ತರೂ, ಪಿಶಾಚಗ್ರಸ್ತರೂ, ಮಕ್ಕಳಾಗದವರೂ ಮಹಾರಾಜರನ್ನು ದುಂಬಾಲ ಬೀಳುತ್ತಿದ್ದರು. ದುರಾಚಾರಿಗಳನ್ನೂ, ಅಸತ್ಯವಾದಿಗಳನ್ನೂ ಕಂಡರೆ ಮಹಾರಾಜರು ಸೇರುತ್ತಿದ್ದಿಲ್ಲ. ಇಂಥ ಜನರಲ್ಲಿ ಕೆಲವರು ಮಹಾರಾಜರ ದೃಷ್ಟಿಗೆ ಬಿದ್ದು ಶಾಪದಗ್ಧರಾದರು. ಆದ್ದರಿಂದ ಸತ್ಪುರುಷರ ಬಳಿಯಲ್ಲಿ ಹೋಗಬೇಕಾದರೆ, ಬಹು ಪವಿತ್ರತೆಯು ಇರಬೇಕಾಗುವದೆಂಬದನ್ನು ಮರೆಯಲಾಗದು. ಮಹಾರಾಜರು ನಿರ್ಭಿಡೆಯ ಸ್ವಭಾವದವರು ಇದ್ದದರಿಂದ ಅವರಿಗೆ ಯಾರ ಹಂಗೂ ಇದ್ದಿಲ್ಲ. ತಮ್ಮ ಮನಸ್ಸಿಗೆ ಅಪ್ರಶಸ್ತವೆಂದು ತೋರಲು, ಅವರು ಎಂಥ ದೊಡ್ಡ ಮನುಷ್ಯನನ್ನಾದರೂ ತಿರಸ್ಕರಿಸದೆ ಬಿಡುತ್ತಿದ್ದಿಲ್ಲ. ಮುಖ್ಯ ತಾತ್ಪರ್ಯ ಇಷ್ಟೇ; ಮಹಾರಾಜರಿಗೆ ಧರ್ಮವು ಬೇಕಾದ್ದರಿಂದ ಅಧರ್ಮಿಗಳು ಅವರಿಗೆ ಬೇಡಾಗುತ್ತಿದ್ದರು.

ಹಾವನೂರಲ್ಲಿದ್ದಾಗ ಮಹಾರಾಜರಿಂದ ಎಷ್ಟೋ ಜನರ ಕಲ್ಯಾಣವಾಯಿತು. ಸಣ್ಣ-ಪುಟ್ಟ ಬೇನೆಯುವರೂ, ಮಹಾರೋಗದವರೂ, ಭೂತಗಳ ಬಾಧೆಯುವರೂ ಮಹಾರಾಜರ ಅನುಗ್ರಹದಿಂದ ಸುಖಿಗಳಾದರು. ಮಹಾರಾಜರು ಉತ್ತರಸೀಮೆಯಲ್ಲಿ ಎಷ್ಟೋ ಅಮಾನುಷ ಕೃತ್ಯಗಳನ್ನು ಮಾಡಿರುವರು; ಎಷ್ಟೋ ಜನರ ರೋಗಗಳನ್ನು ಕಳೆದಿರುವರು. ಎಷ್ಟೋ ಜನರ ಪಿಶಾಚಿಗಳನ್ನು ಹೋಗಲಾಡಿಸಿರುವರು; ಆದರೆ ಅವೆಲ್ಲ ಸಂಗತಿಗಳು ನಿಜವೆಂದು ನಂಬಿಗೆಯುಂಟಾಗಲಿಕ್ಕೆ ನಾವು ಹಾವನೂರಲ್ಲಿ ನೋಡಿದ ಸಂಗತಿಗಳೇ ನಮಗೆ ಬಲವಾದ ಆಧಾರಗಳಾಗಿರುತ್ತವೆಂದು ಬರೆಯಲು ಬಹಳ ಸಂತೋಷವಾಗುತ್ತದೆ. ಪುರಾಣಗಳಲ್ಲಿಯು ಹಾಗು ಹಿಂದಿನ ಹಲವು ಸತ್ಪುರುಷರ ಚರಿತ್ರಗಳಲ್ಲಿಯು ಅಮಾನುಷ ಕೃತ್ಯಗಳನ್ನು ಪಾಮರರಾದ ನಾವು ಸುಳ್ಳೆಂದು ಭಾವಿಸುತ್ತೇವೆ; ಆದರೆ ಈಗಿನ ಕಾಲದಲ್ಲೂ ದೈವೀಶಕ್ತಿಯನ್ನು ಪ್ರಕಟಗೊಳಿಸುವ ಮಹಾತ್ಮರು ಇರುತ್ತಿರುವದರಿಂದ, ನಾವು ಆ ಸಾಮರ್ಥ್ಯವನ್ನು ಕಣ್ಮುಟ್ಟ ನೋಡಿಯಾದರೂ ಸತ್ಪುರುಷರಲ್ಲಿ ವಿಶ್ವಾಸವುಳ್ಳವರಾಗಬೇಕಾಗಿದೆ. ಮಹಾರಾಜರು ತಮ್ಮ ಅಗಾಧವಾದ ಸಾಮರ್ಥ್ಯದಿಂದ ನಮ್ಮಂಥ ಎಷ್ಟೋ ಜನರ ಭ್ರಮನಿರಸನ ಮಾಡಿದರೆಂದು ಹೇಳಬಹುದು. ಇರಲಿ. ಮಹಾರಾಜರು ಹಾವನೂರಲ್ಲಿ ತೋರಿಸಿದ ಅನೇಕ ಚಮತ್ಕಾರಗಳಲ್ಲಿ ನಮ್ಮ ಅನುಭವಕ್ಕೆ ಬಂದ ಒಂದು ಸಂಗತಿಯನ್ನು ಇಲ್ಲಿ ಉದಹರಿಸುತ್ತೇವೆ.

ಹಾನಗಲ್ಲ ತಾಲೂಕಿನಲ್ಲಿರುವ ಶೇಷಗಿರಿ ಎಂಬ ಹಳ್ಳಿಯ ದೇಸಾಯರ ಮನೆತನದಲ್ಲಿ ಒಬ್ಬ ಹೆಣ್ಣುಮಗಳಿಗೆ ಕಾಲು ಇಲ್ಲದೆ ೧೨ ವರ್ಷಗಳಾಗಿ ಹೋಗಿದ್ದವು. ಮುಖ್ಯವಾಗಿ ಕಾಲುಗಳೇ ಮನುಷ್ಯನ ಚಲನವಲನಕ್ಕೆ ಸಾಹಾಯಕಾರಿಗಳಾದ್ದರಿಂದ ಅವೇ ಇಲ್ಲವಿರಲು, ಆ ಹೆಣ್ಣುಮಗಳು ಅನುಭವಿಸುತ್ತಿದ್ದ ಕಷ್ಟಗಳನ್ನು ಬರೆದು ತೀರುವ ಹಾಗೆಯೇ ಇಲ್ಲ. ಹೀಗಿರಲು, ಆ ಸ್ತ್ರೀಯ ಆಪ್ತರು ಆಕೆಯನ್ನು ಕರಕೊಂಡು ಹಾವನೂರಲ್ಲಿರುವ ಮಹಾರಾಜರ ಬಳಿಗೆ ಬಂದರು. ಮಹಾರಾಜರು ಆ ಹೆಣ್ಣುಮಗಳನ್ನು ಮುಂದಕ್ಕೆ ಕರೆದು, ತಮ್ಮ ಕಮಂಡಲೋದಕದಿಂದ ಆಕೆಗೆ ಸಂಪ್ರೋ

ಕ್ಷಣೆಯನ್ನು ಮಾಡಿದರು. ಕೂಡಲೆ ಆಕೆಯ ಮೈಮೇಲೆ ಪಿಶಾಚಿಯು ಸಂಚಾರವಾಗಿ, ಅದು ಮಹಾರಾಜರನ್ನು ಕುರಿತು:— ಮಹಾರಾಜ, ಈ ಸ್ತ್ರೀಯು ಹಿಂದಿನ ಜನ್ಮದಲ್ಲಿ ನನಗೆ ದುಃಖವನ್ನು ಕೊಟ್ಟಿದ್ದರಿಂದ ನಾನು ಈಕೆಯನ್ನು ಹಿಡಿಸಿದ್ದೇನೆ; ಆದರೆ ಇಂದಿನ ದಿವಸ ಮಹಾತ್ಮರಾದ ನಿಮ್ಮ ದರ್ಶನವು ನನಗಾದ್ದರಿಂದ ನಾನು ಈಕೆಯನ್ನು ಬಿಟ್ಟು ಹೋಗುತ್ತೇನೆ, ಎಂದು ನುಡಿದು ಮೇಲಕ್ಕೆ ಏಳತೊಡಗಿತು; ಆದರೆ ಆ ಸ್ತ್ರೀಗೆ ಮೇಲಕ್ಕೇಳಲು ಬರಲಿಲ್ಲ. ಆಗ ಮಹಾರಾಜರು ಕಮಂಡಲೋದಕವನ್ನು ಆ ಸ್ತ್ರೀಯ ಮೊಣಕಾಲುಗಳಿಗೆ ಸಿಂಪಡಿಸಿ, ಅವನ್ನು ತಿಕ್ಕಲಿಕ್ಕೆ ಆಕೆಯ ಆಪ್ತರಿಗೆ ಹೇಳಿದರು. ಒಬ್ಬಿಬ್ಬರು ಆಕೆಯ ಮೊಣಕಾಲುಗಳನ್ನು ಸ್ವಲ್ಪ ತಿಕ್ಕಲು, ಪಿಶಾಚವು ಚಟ್ಟನೆ ಆಕೆಯನ್ನು ಎಬ್ಬಿಸಿ, ಹತ್ತು ಹೆಜ್ಜೆಗಳ ವರೆಗೆ ಕರಕೊಂಡು ಹೋಗಿ ಆಕೆಯ ದೇಹದಿಂದ ಹೊರಟು ಹೋಯಿತು. ಪಿಶಾಚಿಯು ಮೈಬಿಟ್ಟು ಹೋಗಲು, ಆ ಹೆಣ್ಣುಮಗಳು ಅಲ್ಲಿಯೇ ಬಿದ್ದಳು. ಬಳಿಕ ಆಕೆಯ ಆಪ್ತರು ಆಕೆಯನ್ನು ಎಬ್ಬಿಸಿ, ಮಹಾರಾಜರ ಬಳಿಗೆ ಕರೆ ತಂದರು. ಆ ಕ್ಷಣ ಮೊದಲುಗೊಂಡು ಆ ಸ್ತ್ರೀಯು ನಡೆದಾಡಹತ್ತಿದಳು. ೧೨ ವರ್ಷಗಳ ವರೆಗೆ ಕಾಲು ಹೋಗಿ ಮೂಲೆಗುಂಪಾಗಿ ಬಿದ್ದ ಆ ಹೆಣ್ಣುಮಗಳಿಗೆ ಈಗ ಎಷ್ಟು ಸಂತೋಷವೂ, ಆಶ್ಚರ್ಯವೂ ಆಗಿರಲಿಕ್ಕಿಲ್ಲ! ಆಕೆಯ ಆಪ್ತರಂತೂ ಮಹಾರಾಜರನ್ನು ದೇವರೆಂತಲೇ ತಿಳಿದರು. ಕೂಡಿದ ಜನರು ಕೌತುಕಪಟ್ಟು ಮಹಾರಾಜರಲ್ಲಿ ವಿಶ್ವಾಸವುಳ್ಳವರಾದರು. ಇಂಥ ಅಗಾಧ ಸಾಮರ್ಥ್ಯವನ್ನು ನೋಡಿ ಯಾರಿಗೆ ಭಕ್ತಿಯು ಹುಟ್ಟಲಿಕ್ಕಿಲ್ಲ! ಇರಲಿ.

ಹಿಂಗೋಲಿಯಿಂದ ಒಬ್ಬ ಮಾರವಾಡಿಯು ತನ್ನ ತಾಯಿಯೊಡನೆ ಮಹಾರಾಜರ ದರ್ಶನಕ್ಕಾಗಿ ಹಾವನೂರಿಗೆ ಬಂದನು. ಅವನ ತಾಯಿಗೆ ಕೆಲವು ದಿವಸಗಳಿಂದ ಹುಚ್ಚು ಹಿಡಿದು ಆಕೆಯು ಮೈಮೇಲಿನ ಅರಿವೆಗಳ ಪರಿವೆಯಿಲ್ಲದೆ ಇರಲು, ಆ ಮಾರವಾಡಿಯು ತಾಯಿಯ ಸ್ಥಿತಿಗೆ ಬಹಳವಾಗಿ ದುಃಖಪಟ್ಟು ಮಹಾರಾಜರಿಗೆ ಶರಣು ಹೋಗಲು, ಅವರು ಅವನಿಗೆ ಒಂದು ಯಂತ್ರವನ್ನು ಮಾಡಿಕೊಟ್ಟರು. ಆ ಯಂತ್ರಪ್ರಭಾವದಿಂದ

ಆ ಮಾರವಾಡಿಯ ತಾಯಿಯ ಹುಚ್ಚು ಹಾಳಾಗಿ ಹೋಗಲು, ಅವನು ಪರಮ ಸಂತೋಷಚಿತ್ತನಾಗಿ ಮಹಾರಾಜರ ದರ್ಶನವನ್ನು ಯಾವಾಗ ತಕ್ಕೊಂಡೇನೆಂಬ ಅತ್ಯಾತುರದಿಂದ ಮೇಲೆ ಹೇಳಿದಂತೆ ಹಾವನೂರಿಗೆ ಬಂದನು. ಅವನು ಮಹಾರಾಜರನ್ನು ಪರಿಪರಿಯಿಂದ ಸ್ತುತಿಸಿ, ಕೃತಜ್ಞತೆಯನ್ನು ವ್ಯಕ್ತಗೊಳಿಸಿದನು. ಮಹಾರಾಜರು ಮಾರವಾಡಿಯ ತಾಯಿಗೆ ಗುಣವಾದದ್ದನ್ನು ಕಂಡು ಸಂತೋಷಪಟ್ಟು:— ಅಪ್ಪಾ, ಶ್ರೀದತ್ತನು ನಿನ್ನ ತಾಯಿಗೆ ಕಲ್ಯಾಣ ಮಾಡಿದನು. ಸುಖರೂಪದಿಂದ ಊರಿಗೆ ಹೋಗು, ಎಂದು ಅವನಿಗೆ ಅಪ್ಪಣೆಕೊಟ್ಟರು. ಅವನು ಮಹಾರಾಜರಲ್ಲಿ ನಟ್ಟ ಮನಸ್ಸನ್ನು ತಿರುಗಿ ಕಿತ್ತುಕೊಳ್ಳದಾದನು. ಸತ್ಪುರುಷರು ಜನರಲ್ಲಿ ಭಕ್ತಿ ಶ್ರದ್ಧೆಗಳನ್ನು ಹುಟ್ಟಿಸುವದಕ್ಕಾಗಿಯೇ ದೈವೀಸಾಮರ್ಥ್ಯವನ್ನು ಉಪಯೋಗಿಸುವದುಂಟೆಂಬದು ಇಂಥ ಉದಾಹರಣೆಗಳ ಮೇಲಿಂದ ಸಿದ್ಧವಾಗುವದು. ಹೀಗೆ ಸಣ್ಣ ದೊಡ್ಡ ಹಲವು ಚಮತ್ಕಾರಗಳನ್ನು ನೋಡಿ, ಹಾವನೂರ ನಿವಾಸಿಗಳು ಮಹಾರಾಜರು ತಮ್ಮನ್ನು ಪಾವನ ಮಾಡುವದಕ್ಕಾಗಿಯೇ ತಮ್ಮ ಊರಿಗೆ ಬಂದಿರುವರೆಂದು ಭಾವಿಸಿದರು. ಮಹಾರಾಜರು ಹಾವನೂರಲ್ಲಿದ್ದಾಗ ತುಂಗಾನದಿಯಲ್ಲಿ ಸ್ನಾನವನ್ನೂ, ಊರ ಬ್ರಾಹ್ಮಣರಲ್ಲಿ ಭಿಕ್ಷೆಯನ್ನೂ ಮಾಡುತ್ತ ಒಂದು ದೇವಾಲಯದಲ್ಲಿ ಕಾಲಕ್ರಮಣ ಮಾಡಿದರು. ಜನರಿಗೆ ಅನಂತ ಸೌಖ್ಯಗಳನ್ನು ಒದಗಿಸಿಕೊಡುವಷ್ಟು ಸಾಮರ್ಥ್ಯವು ಅವರಲ್ಲಿದ್ದರೂ ಅವರು ಒಬ್ಬ ಸಾಮಾನ್ಯ ಭಿಕ್ಷುಕರಂತೆ ಇರುತ್ತಿದ್ದುದನ್ನು ನೋಡಿ, ಅವರ ನಿಸ್ಪೃಹವೃತ್ತಿಗೆ ಎಂಥವನಾದರೂ ತಲೆದೂಗದೆ ಇರನು.

ಈ ಮೇರೆಗೆ ಮಹಾರಾಜರು ಲೀಲೆಗಳನ್ನು ತೋರಿಸುತ್ತ, ಹಾವನೂರಲ್ಲಿ ಚಾತುರ್ಮಾಸ್ಯದ ವಿಧಾನಗಳನ್ನು ಮುಗಿಸಿಕೊಂಡು ಅಲ್ಲಿಂದ ಹೊರಟರು. ಅವರು ಹಾದಿಯಲ್ಲಿ ಹತ್ತುವ ಆನಂದವನಕ್ಕೆ ಪುನಃ ದಯ ಮಾಡಿದರು. "ಸತಾಂ ಸದದ್ಭಿಃ ಸಂಗಃ ಕಥಮಪಿಹಿ ಪುಣ್ಯೇನ ಭವತಿ |" ಎಂಬ ಭವಭೂತಿ ಕವಿಯ ಉಕ್ತಿಯಂತೆಯೂ, "ಸಜ್ಜನಾಚಾ ಯೋಗ ಸಜ್ಜನಾಸಿ ಆಹೆ| " ಎಂಬ ರಾಮದಾಸೋಕ್ತಿಯಂತೆಯೂ ಮಹಾರಾಜರು

ಸಾಧುಗಳ ದರ್ಶನವನ್ನು ಇಚ್ಛಿಸಿದ್ದು ಯಥಾರ್ಥವಾಗಿರುವದು. ಮಹಾರಾಜರು ಬರುವರೆಂಬ ಸುದ್ದಿಯು ಮುಂಚಿತವಾಗಿಯೇ ಆನಂದವನಸ್ಥರಿಗೆ ಗೊತ್ತಾಗಲು, ಗೃಹಸ್ಥಾಶ್ರಮಿಗಳಾದ ಶ್ರೀ ಶೇಷಾಚಲ ಸಾಧುಗಳೇ ಮೊದಲಾದವರು ಶ್ರೀಗಳವರ ದರ್ಶನಕ್ಕಾಗಿ ಎದುರು ಹೊರಟರು. ಮಹಾರಾಜರು ಆನಂದವನದ ಮಹಾದ್ವಾರದ ಹೊರಗೆ ಮಾರ್ಗದಲ್ಲಿ ಬರುತ್ತಿರುವಾಗ ಮಹಾನುಭಾವರಾದ ನಮ್ಮ ಶೇಷಾಚಲ ಸದ್ಗುರುಗಳವರು, ಯತಿಗಳು ಕೇವಲ ನಾರಾಯಣನ ಸ್ವರೂಪವೆಂದು ಭಾವಿಸಿ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು. ಶ್ರೀ ಸದ್ಗುರುಗಳ ವೇದ ಮತ್ತು ಸಂಸ್ಕೃತ ಪಾಠಶಾಲಾಧ್ಯಾಪಕರು ತಮ್ಮ ಶಿಷ್ಯರೊಡನೆ ಯತಿಗಳ ದರ್ಶನವಾದಾಗ ಅನ್ನುವ 'ನಕರ್ಮಣಾ ನ ಪ್ರಜಯಾ ||' ಇತ್ಯಾದಿ ಉಪನಿಷದ್ವಚನಗಳನ್ನು ಅಂದು ಫಲಗಳನ್ನು ಮುಂದಿಟ್ಟು, ಮಹಾರಾಜರಿಗೆ ನಮಸ್ಕರಿಸಿದರು. ಶ್ರೀ ಸಾಧುಗಳವರು ನಮಸ್ಕಾರ ಮಾಡಿ ಎಂಟು-ಹತ್ತು ನಿಮಿಷಗಳ ವರೆಗೆ ಮಹಾರಾಜರ ಮುಂದೆ ಕೈಜೋಡಿಸಿಕೊಂಡು ಬ್ರಹ್ಮಾನಂದದಿಂದ ತೂಗಾಡುತ್ತ ನಿಂತರು. ಆ ಬಳಿಕ ಶ್ರೀ ಸಾಧುಗಳವರು ಕೂಡಿದ ಎಲ್ಲ ಜನರನ್ನು ಆತ್ಮಸ್ವರೂಪದಿಂದ ನೋಡಿ ತಲೆಬಾಗಿ ವಂದನೆ ಮಾಡಿ ಶ್ರೀ ಮಹಾರಾಜರಿಗೆ ಒಳಗೆ ಬರುವದಕ್ಕೆ ವಿಜ್ಞಾಪಿಸಿಕೊಂಡರು. ಆ ವಿಜ್ಞಾಪನೆಗೆ ಮಾಡಿಕೊಟ್ಟು, ಮಹಾರಾಜರು ಆನಂದವನವನ್ನು ತಮ್ಮ ಪಾದಸ್ಪರ್ಶದಿಂದ ಪಾವನ ಮಾಡಿದರು.

ಬಳಿಕ ಶ್ರೀ ಶೇಷಾಚಲ ಸದ್ಗುರುಗಳವರು ಮಹಾರಾಜರಿಗೆ ಆಸನವನ್ನು ಕೊಟ್ಟು ಆದರದಿಂದ ಅವರನ್ನು ಕುಳ್ಳಿರಿಸಿ ತಾವೂ ಕುಳಿತುಕೊಂಡರು. ದೊಡ್ಡವರು ಮನೆಗೆ ಬಂದಾಗ ಅವರ ಮಾತುಗಳನ್ನೇ ಕೇಳಬೇಕಲ್ಲದೆ, ನಡುವೆ ತಾವು ಅಹಂಭಾವದಿಂದ ಮಾತಾಡಬಾರದೆಂಬ ವಾರ್ತಿಕಕಾರರ ಅಭಿಪ್ರಾಯದಂತೆ ಶ್ರೀ ಸಾಧುಗಳಾದರೂ ನಗೆ ಮೊಗದಿಂದ ಮಹಾರಾಜರ ಮಾತುಗಳನ್ನೇ ಕೇಳುತ್ತಿದ್ದರು. ಒಂದು ದಿನವಾದರೂ ಆನಂದವನದಲ್ಲಿ ನಿಂತು ಹೋಗಬೇಕೆಂದು ಸಾಧುಗಳವರ ಶಿಷ್ಯರು ಮಹಾರಾಜರನ್ನು ಪ್ರಾರ್ಥಿಸಿದರು; ಆದರೆ ಸಾಧುಗಳವರು ನಾರಾ

ಯಣಾನ ಇಚ್ಛೆಗೆ ಬಂದಂತಾಗಲಿ, ಎಂದು ನುಡಿದರು. ಅದಕ್ಕೆ ಮಹಾರಾಜರವರು:— ದರ್ಶನದಿಂದ ಸಂತೋಷವಾಯಿತು. ಇಷ್ಟೇ ಸಾಕು, ಎಂದು ನುಡಿದು ಸುಮ್ಮನೆ ಕುಳಿತರು. ಮಹಾರಾಜರ ಪ್ರೀತ್ಯರ್ಥವಾಗಿ ವೇದಶಾಲೆಯ ವಿದ್ಯಾರ್ಥಿಗಳು ವೇದಘೋಷವನ್ನು ಸುಸ್ವರದಿಂದ ಮಾಡಿದರು. ವೇದಘೋಷವನ್ನು ಕೇಳಿ ಮಹಾರಾಜರು ಬಹಳ ಆನಂದಪಟ್ಟು: "ಈ ಕಾಲದಲ್ಲಿ ವೇದಪಾಠವು ಎಲ್ಲಿಯೂ ಕೇಳಬರುವದಿಲ್ಲ. ವೇದವೇ ಬ್ರಾಹ್ಮಣರಿಗೆ ಆಧಾರವೂ, ಭೂಷಣವೂ ಆಗಿರುವದು. ಹೀಗೆ ವೇದಘೋಷವು ಇಲ್ಲಿ ನಡೆಯುವದನ್ನು ನೋಡಿ ನನಗೆ ಬಹಳ ಆನಂದವಾಗುತ್ತದೆ. ಹೀಗೆ ಯಾವಾಗಲೂ ಇಲ್ಲಿ ವೇದಘೋಷವಾಗಲಿ! ಎಂದು ಎಂದು ಹರಸಿಡಿದರು. ಆ ಮೇಲೆ ಪಾಠಶಾಲೆಯ ಸಂಸ್ಕೃತಾಧ್ಯಾಪಕರು ಸಂಸ್ಕೃತ ಭಾಷೆಯಿಂದ ಸಂಸ್ಥೆಯ ಎಲ್ಲ ಸ್ಥಿತಿಯನ್ನು ಮಹಾರಾಜರಿಗೆ ನಿವೇದಿಸಿದರು. ಬಳಿಕ ಮಹಾರಾಜರು ವಿದ್ಯಾರ್ಥಿಗಳಿಗೆ ಆಶೀರ್ವದಿಸಿ, ಸಾಧುಗಳವರ ನಿರೂಪ ತೆಗೆದುಕೊಂಡು ಪರಿವಾರದೊಡನೆ ಹೊರಟರು; ಶ್ರೀಶೇಷಾಚಲ ಸದ್ಗುರುಗಳವರು ಅವರನ್ನು ಮಹಾದ್ವಾರದ ಹೊರತನಕ ಕಳಿಸಹೋಗಿದ್ದರು. ಆಗ ಶ್ರೀ ಸಾಧುಗಳು ಮಹಾರಾಜರನ್ನು ಕುರಿತು: ತಮ್ಮ ದರ್ಶನವು ಈ ದೇಹಕ್ಕೆ ಹಿಂದಕ್ಕೊಮ್ಮೆ ವಾಡಿಯಲ್ಲಿ ಆಗಿತ್ತು; ಎಂದು ನುಡಿದರು. ಅದನ್ನು ಕೇಳಿ ಮಹಾರಾಜರು: "ಆ ಮಾತಿಗೆ ಇಪ್ಪತ್ತುನಾಲ್ಕು ವರ್ಷಗಳಾಗಿರಬಹುದು. ನಾನು ಆಗ ಪೂರ್ವಾಶ್ರಮದಲ್ಲಿದ್ದೆನು. ಆಗ ತಾವು ಹೇಳಿದ ಮಾತುಗಳು ಮುಂದೆ ನನ್ನ ಅನುಭವಕ್ಕೆ ಬಂದವು," ಎಂದು ವಿನಯದಿಂದ ಮಾತಾಡಿ, ಮನಸಾ ಸಾಧುಗಳನ್ನು ಅಭಿವಂದಿಸಿ, ಅಗಡಿಯ ಕಡೆಗೆ ಹೋದರು.

ಮಹಾರಾಜರು ಆನಂದವನದಲ್ಲಿ ನಿಲ್ಲದಿರುವದಕ್ಕೆ ಪ್ರಾಮುಖ್ಯವಾಗಿ ಅವರ ಸೌಜನ್ಯವೇ ಕಾರಣವಾಗಿರುತ್ತದೆ. ಯಾಕಂದರೆ ಮಹಾರಾಜರ ಬಳಿಯಲ್ಲಿ ಜನರ ಸಮ್ಮರ್ದವು ಹೆಚ್ಚು; ಯಂತ್ರ-ತಂತ್ರಗಳ ಗೊಂದಲವು ಬಹಳ. ಭೂತ-ಪಿಶಾಚಿಗಳನ್ನು ಬಿಡಿಸೋಣವೂ, ರೋಗಾದಿಗಳ ಚಿಕಿತ್ಸೆ ಮುಂತಾದವುಗಳ ಉಪಾಧಿಯೂ ವಿಶೇಷವಾಗಿದ್ದದ

ರಿಂದ, ಇವುಗಳ ನಿಮಿತ್ತವಾಗಿ ನೆರೆಯುವ ಜನಸಮ್ಮರ್ದದಿಂದ ಸಾಧುಗಳಿಗೆ ತೊಂದರೆ ಕೊಡಬಾರದೆಂದು ಅವರು ಬಗೆದದ್ದು ಯೋಗ್ಯವಾಗಿರುವದು. ಈ ಮಾತನ್ನು ಮಹಾರಾಜರು, ಸಾಧುಗಳ ಶಿಷ್ಯರು ಆಗ್ರಹ ಮಾಡಿದಾಗ ಆಡಿ ತೋರಿಸಿದರು. ಅಂದಬಳಿಕ ಮಹಾರಾಜರಲ್ಲಿ ತಮ್ಮಿಂದ ಮುಂದಿಗೆ ವೃಥಾ ತೊಂದರೆಯಾಗಬಾರದೆಂಬ ಸೌಜನ್ಯವು ಎಷ್ಟಿತ್ತೆಂಬದು ವ್ಯಕ್ತವಾಗುತ್ತದೆ. ತಮ್ಮ ಅಧ್ಯಾತ್ಮತೆಯಲ್ಲಿಯೇ ಇದ್ದು, ಪರರ ಹಿತಾಹಿತಗಳನ್ನು ತಿಳಿಯದವರಿಗೆ ಮಹಾತ್ಮರೆಂದು ಯಾರಾದರೂ ಕರೆಯುವದುಂಟೆ? ಅಲೌಕಿಕ ಗುಣಗಳಿದ್ದ ಹೊರತು ಯಾರೂ ಪೂಜ್ಯಸ್ಥಾನವನ್ನು ಪಡೆಯಲಾರರು. ಹೀಗೆ ಸೌಜನ್ಯದಿಂದ ಮಹಾರಾಜರು ಅಗಡಿಗೆ ಹೋಗಿ ಭಿಕ್ಷೆಯನ್ನು ತೀರಿಸಿಕೊಂಡು ಮುಂದೆ ನಡೆದರು. ಹರಿಹರ ಕ್ಷೇತ್ರವು ಕರ್ನಾಟಕದಲ್ಲಿ ಪ್ರಸಿದ್ಧವಿದ್ದದರಿಂದ, ಮಹಾರಾಜರು ಅಲ್ಲಿಗೆ ಹೋದರು. ಅವರು ಅಲ್ಲಿ ಶ್ರೀ ಹರಿಹರೇಶ್ವರನ ದರ್ಶನವನ್ನು ತಕ್ಕೊಂಡು, ಕಾವೇರೀ ತೀರದ ಕಡೆಗೆ ನಡೆದರು. ಆಗ ಶ್ರೀಮಜ್ಜಗದ್ಗುರು ಶ್ರಿಂಗೇರಿ ಮಠಾಧೀಶರಾದ ಶ್ರೀಮತ್ಪರಮಹಂಸ ಸಚ್ಚಿದಾನಂದ ಶಿವಾಭಿನವ ಶ್ರೀ ನೃಸಿಂಹಭಾರತೀ ಸ್ವಾಮಿಗಳವರು ಕಾವೇರೀ ತೀರದಲ್ಲಿ ವಾಸ ಮಾಡಿದ್ದರು. ಮಹಾರಾಜರು ಅನಾಯಾಸವಾಗಿ ಜಗದ್ಗುರುಗಳವರ ದರ್ಶನವಾದದ್ದಕ್ಕೆ ಬಹಳ ಸಂತೋಷಪಟ್ಟು, ಸಂಸ್ಕೃತಭಾಷೆಯಿಂದ ಶ್ಲೋಕಬದ್ಧವಾಗಿ ಜಗದ್ಗುರುಗಳ ಸ್ತವನ ಮಾಡಿದರು. ಜಗದ್ಗುರುಗಳವರು ಮಹಾರಾಜರ ಯೋಗ್ಯತೆಯನ್ನು ತಿಳಿದು, ಅವರನ್ನು ಯಥೋಚಿತವಾದ ಆಸನಾದ್ಯುಪಚಾರಗಳಿಂದ ಸತ್ಕರಿಸಿದರು. ಯಥಾಪ್ರಕಾರವಾಗಿ ಮಹಾರಾಜರ ಭಿಕ್ಷೆಯಾಯಿತು.

ಭಿಕ್ಷಾವಂದನವು ಮುಗಿದ ಬಳಿಕ ಜಗದ್ಗುರುಗಳವರು ನೆರೆದ ಜನಸಮೂಹಕ್ಕೆಲ್ಲ ಮಹಾರಾಜರ ಪರಿಚಯವನ್ನು ಮಾಡಿಕೊಟ್ಟರು. ಶ್ರೀ ಜಗದ್ಗುರುಗಳ ಬಳಿಯಲ್ಲಿ ಸಾವಿರಾರು ಜನರು ಪ್ರಸಾದಕ್ಕಾಗಿ ಕೂಡಿದ್ದರು. ಅವರೆಲ್ಲರನ್ನು ಕುರಿತು ಜಗದ್ಗುರುಗಳು ನುಡಿದರೇನಂದರೆ:—"ಭಕ್ತಜನರೇ, ನೀವು ಈ ಶ್ರೀ ವಾಸುದೇವಾನಂದ ಸರಸ್ವತೀ ಮಹಾರಾ

ಜರನ್ನು ತಿಳಿಯಲಾರಿರಿ. ಇವರು ಮಹಾತ್ಮರಿರುವರು. ಇವರ ತಾಯಿ-ತಂದೆಗಳ ಉಪಕಾರವು ನಮ್ಮ ಮೇಲೆ ಬಹಳವಾಗಿರುತ್ತದೆಂದು ನಾನು ಭಾವಿಸುತ್ತೇನೆ. ಈ ಮಹಾರಾಜರು ನಮ್ಮ ಆದ್ಯ ಶ್ರೀಮಚ್ಛಂಕರ ಪ್ರಭೃತಿಗಳೇ ಎಂದು ತಿಳಿಯಲಿಕ್ಕೆ ಅಡ್ಡಿಯಿಲ್ಲ. ಶ್ರೀಮಚ್ಛಂಕರ ಭಗವತ್ಪಾದರವರು ಪ್ರಕಟರಾಗಿ ಧರ್ಮಸ್ಥಾಪನೆಯನ್ನು ಮಾಡಿದರೆ, ಇವರು ಗುಪ್ತವಾಗಿ ಧರ್ಮಸಂರಕ್ಷಣೆಯನ್ನು ಮಾಡುತ್ತ ಬಂದಿರುವರು. ಎಂಥ ನಾಸ್ತಿಕನಿದ್ದರೂ ಇವರ ದರ್ಶನದಿಂದ ಹಾದಿಗೆ ಬರುತ್ತಾನೆ. ಇವರು ಇವ್ವೊತ್ತಿನವರೆಗೆ ಎಷ್ಟೋ ಜನ ಧರ್ಮಲಂಡರನ್ನು ಸನ್ಮಾರ್ಗಕ್ಕೆ ಹಚ್ಚಿರುತ್ತಾರೆ. ಇವರ ದರ್ಶನದಿಂದ ಪತಿತರು ಪಾವನರಾಗುವದರಲ್ಲಿ ಸಂಶಯವಿಲ್ಲ. ಪಾಮರರನ್ನು ಉದ್ಧರಿಸುವದಕ್ಕಾಗಿಯೇ ಇವರು ಪಾದಚಾರಿಗಳಾಗಿ, ತೀರ್ಥಾಟನ ಮಾಡುತ್ತ ತಿರುಗುತ್ತಾರೆ. ಧರ್ಮಹೀನವಾದ ಈಗಿನ ಕಾಲದಲ್ಲಿ ಈ ಮಹಾತ್ಮರು ಜನರಿಗೆ ಧರ್ಮೋಪದೇಶವನ್ನು ಮಾಡುತ್ತಿರುವದನ್ನು ನೋಡಿದರೆ, ಇವರು ನಮ್ಮ ಆಚಾರ್ಯರವರ ಹೆಸರನ್ನು ಎತ್ತಿದರೆಂದು ಸಂತೋಷವಾಗುತ್ತದೆ. ಆದ್ದರಿಂದಲೇ ನಾನು ಇವರನ್ನು ಆಚಾರ್ಯರೆಂದು ಭಾವಿಸುತ್ತೇನೆ ''

ಈ ಮೇರೆಗೆ ಶ್ರೀ ಜಗದ್ಗುರುಗಳು ಸ್ವಕಂಠದಿಂದ ಹೇಳಿದ್ದನ್ನು ಕೇಳಿ ನೆರೆದ ಜನಸಮೂಹಕ್ಕೆಲ್ಲ ಸಾನಂದಾಶ್ಚರ್ಯವಾಯಿತು. ಪ್ರತಿಯೊಬ್ಬನು ಮಹಾರಾಜರನ್ನು ಲಕ್ಷಗೊಟ್ಟು ನೋಡಹತ್ತಿದನು. ಜನರಲ್ಲಿ ಮಹಾರಾಜರ ವಿಷಯವಾಗಿ ಪೂಜ್ಯಬುದ್ಧಿಯು ಉತ್ಪನ್ನವಾಯಿತು. ಮಹಾರಾಜರು ಹೇಳಿದ ಮಾತುಗಳನ್ನು ಕೇಳಿ ಅತಿ ವಿನಯದಿಂದ: ಜಗದ್ಗುರುಗಳೇ, ತಾವು ಹೇಳಿದಂತೆ ನಾನು ಅಷ್ಟು ಸ್ತುತಿಗೆ ಪಾತ್ರನಲ್ಲ. ತಾವು ಸರ್ವಗುಣಪರಿಪೂರ್ಣರಿದ್ದದರಿಂದಲೇ ಆಚಾರ್ಯರವರ ಪೀಠವನ್ನಲಂಕರಿಸಿರುತ್ತೀರಿ. ನಾನು ತಮ್ಮ ಆಜ್ಞಾಧಾರಕ ಸೇವಕನು. ಇತ್ಯಾದಿ ಮಾತುಗಳನ್ನಾಡಿದರು. ಬಳಿಕ ಮಹಾರಾಜರವರು ಜಗದ್ಗುರುಗಳ ಅಪ್ಪಣೆಯನ್ನು ಹೊಂದಿ, ಶ್ರೀ ಸದಾಶಿವೇಂದ್ರಸ್ವಾಮಿಗಳವರ ಸಮಾಧಿಯ ದರ್ಶನವನ್ನು ತಕೊಂಡು, ಶ್ವೇತಾರಣ್ಯ, ಶ್ವೇತಾಚಲ, ಕುಂಭಕೋಣ

ಮೊದಲಾದವುಗಳನ್ನು ನೋಡುತ್ತ ತಂಜಾವರಕ್ಕೆ ಹೋದರು. ಅಲ್ಲಿ ಒಬ್ಬ ಬ್ರಾಹ್ಮಣ ವಿಧವೆಯು ಮಹಾರಾಜರ ದರ್ಶನಕ್ಕೆ ಬಂದಳು. ಆ ವಿಧವೆಯು ದಮ್ಮಿನ ಬೇನೆಯಿಂದ ಬಹಳ ಕ್ಷೀಣವಾಗಿದ್ದಳು. ಮಹಾರಾಜರು ಆಕೆಯನ್ನು ನೋಡಿ ಕನಿಕರಪಟ್ಟು, ತಮ್ಮ ಹತ್ತರ ಇದ್ದ ಒಬ್ಬ ಶಿಷ್ಯನಿಗೆ ಆಕೆಗೆ ತೀರ್ಥವನ್ನು ಕೊಡಲಿಕ್ಕೆ, ಆಜ್ಞಾಪಿಸಿದರು. ಅದರಂತೆ ಒಬ್ಬ ಶಿಷ್ಯನು ಆಕೆಗೆ ತೀರ್ಥಕೊಟ್ಟನು. ಆ ಸ್ತ್ರೀಯು ಮನೆಗೆ ಹೋಗಿ ವಮನ ಮಾಡಿಕೊಂಡಳು. ಆಗ ಕಫವೆಲ್ಲ ಬಿದ್ದು ಹೋಯಿತು. ಮುಂದೆ ಆಕೆಯು ಒಮ್ಮೆಯಾದರೂ ಕೆಮ್ಮಲಿಲ್ಲ. ಈ ಪ್ರಕಾರವಾಗಿ ಮಹಾರಾಜರು ಸಂಚರಿಸುತ್ತ ಶ್ರೀರಾಮೇಶ್ವರದ ಕಡೆಗೆ ಸಾಗಿದರು.

---

## ರುದ್ರಸ್ವಾಹಾಕಾರ.

ಶ್ರೀಕ್ಷೇತ್ರ ರಾಮೇಶ್ವರದ ಯಾತ್ರೆಯು ಯಥಾಸಾಂಗವಾಗಲು, ಮಹಾರಾಜರು ಉತ್ತರಕ್ಕೆ ಪ್ರಯಾಣ ಬೆಳಸಿದರು. ಅವರು ತ್ರಿಚಿನಾಪಳ್ಳಿ-ಶ್ರೀರಂಗಪಟ್ಟಣಗಳ ಮೇಲೆ ಹಾಯ್ದು ಬನವಾಸಿಗೆ ಬಂದರು. ಅಲ್ಲಿ ಒಬ್ಬ ಗೃಹಸ್ಥನು ಮಹಾರಾಜರ ದರ್ಶನಕ್ಕೆ ಬಂದು: ಸ್ವಾಮಿ, ನಾನು ಹೊಸದಾಗಿ ಮನೆಯನ್ನು ಕಟ್ಟಿಸಬೇಕಾಗಿದೆ; ಆದರೆ ನಮ್ಮ ಮನೆಯಲ್ಲಿ ಒಂದು ಪಿಶಾಚಿಯು ಸೇರಿಕೊಂಡು: "ಹೊಸಮನೆಯನ್ನು ಕಟ್ಟಿಸಿದೆಯೆಂದರೆ ಅದನ್ನು ಸುಟ್ಟುಬಿಡುತ್ತೇನೆ"ಂದು ನನ್ನನ್ನು ಹೆದರಿಸುತ್ತದೆ. ಆ ಪಿಶಾಚಿಯು ಹೆದರಿಕೆಯಿಂದ ನನಗೆ ಸಮಾಧಾನವೇ ಇಲ್ಲದಾಗಿದೆ. ಮಹಾತ್ಮರಾದ ತಾವು ಅನಾಯಾಸವಾಗಿ ನಮ್ಮಲ್ಲಿಗೆ ಬಂದದ್ದರಿಂದ, ದೀನನಾದ ನನ್ನನ್ನು ಪಿಶಾಚಿಬಾಧೆಯಿಂದ ಉದ್ಧರಿಸಬೇಕು, ಎಂದು ದೈನ್ಯೋಕ್ತಿಗಳಿಂದ ಹೇಳಿಕೊಂಡನು. ಮಹಾರಾರಾಜರು ಮಂತ್ರ ಸಾಮರ್ಥ್ಯದಿಂದ ಆ ಪಿಶಾಚಿಯನ್ನು ತಮ್ಮ ಹತ್ತರ ಬರಮಾಡಿಕೊಂಡು, ಅದಕ್ಕೆ ಆ ಗೃಹಸ್ಥನ ಮನೆಯನ್ನು ಬಿಟ್ಟು ಹೋಗಲು ಆಜ್ಞಾಪಿಸಿದರು.

ಪಿಶಾಚಿಯು ತನ್ನ ವಾಸನಾಪೂರ್ಣವಾಗುವದಕ್ಕಾಗಿ ಬ್ರಾಹ್ಮಣಸಂತರ್ಪಣೆಯನ್ನು ಮಾಡಿಸಬೇಕೆಂದು ವಿಜ್ಞಾಪಿಸಿಕೊಂಡಿತು. ಆ ಗೃಹಸ್ಥನು ಮಹಾರಾಜರ ಅಪ್ಪಣೆಯಿಂದ ಬ್ರಾಹ್ಮಣ ಸಂತರ್ಪಣೆಯನ್ನು ಮಾಡಿ. ಪಿಶಾಚಿಯ ಕಾಟದಿಂದ ಮುಕ್ತನಾದನು. ಬಳಿಕ ಮಹಾರಾಜರು ದಕ್ಷಿಣ ಕಾಶಿಯೆನಿಸುವ ಶ್ರೀ ಗೋಕರ್ಣ ಕ್ಷೇತ್ರಕ್ಕೆ ಹೋದರು. ಅಲ್ಲಿ ಅವರು ಮಹಾಬಳೇಶ್ವರನ ದರ್ಶನವನ್ನು ತಕೊಂಡು ಗಾಲವ ಕ್ಷೇತ್ರಕ್ಕೆ ನಡೆದರು. ಅಲ್ಲಿಯ ಬ್ರಾಹ್ಮಣರು ತಮ್ಮ ಕಲ್ಯಾಣಕ್ಕಾಗಿ ಮಹಾರಾಜರನ್ನು ಪ್ರಾರ್ಥಿಸಿ. ಸಂಹಿತೆ-ರುದ್ರ-ಪವಮಾನ ಇವುಗಳ ಸ್ವಾಹಾಕಾರವನ್ನು ಮಾಡಲುಪಕ್ರಮಿಸಿದರು. ಮಹಾರಾಜರು ತಾವು ಸ್ವತಃ ನಿಂತು, ಅವರ ಮನೋಭೀಷ್ಟಗಳನ್ನು ಪೂರ್ಣಪಡಿಸಿದರು. ಸ್ವಾಹಾಕಾರದ ಮಹಾಕಾರ್ಯದಲ್ಲಿ ಮಹಾರಾಜರು ಆ ಬ್ರಾಹ್ಮಣರಿಗೆ ಬಹಳ ಸಹಾಯ ಮಾಡಿದರು. ಮಹಾರಾಜರಂಥ ಸತ್ಪುರುಷರ ಸಾನ್ನಿಧ್ಯದಿಂದ ಗಾಲವ ಕ್ಷೇತ್ರನಿವಾಸಿಗಳು ಮಾಡಿದ ಸ್ವಾಹಾಕಾರವು ಪುಣ್ಯಪ್ರದವಾಗಿ ನಿರ್ವಿಘ್ನದಿಂದ ಸಾಂಗವಾಯಿತು. ಸ್ವಾಹಾಕಾರಕ್ಕೆ ಸರಿಯಾಗಿ ಶಾಸ್ತ್ರೋಕ್ತ ಅನ್ನಸಂತರ್ಪಣಾದಿಗಳು ಮಾಡಲ್ಪಟ್ಟವು.

ಬಳಿಕ ಮಹಾರಾಜರು ಗಾಲವಕ್ಷೇತ್ರದಿಂದ ಹೊರಟು ಜೈನಾಪುರ ಎಂಬಲ್ಲಿಗೆ ಬಂದರು. ಅಲ್ಲಿ ಒಬ್ಬ ಲಿಂಗಾಯತರ ಹೆಣ್ಣುಮಗಳು ಪ್ರತಿಯೊಂದು ಪಕ್ಷದ ಚತುರ್ದಶಿಯಿಂದ ಪ್ರತಿಪದೆಯ ವರೆಗೆ ೩ ದಿವಸ ನಿಶ್ಚೇಷ್ಟಿತಳಾಗಿ ಬೀಳುತ್ತಿದ್ದಳು. ಇದಕ್ಕಾಗಿ ಆ ಮನೆಯವರು ಬಹಳ ತೊಂದರೆಗೊಳಗಾಗಿದ್ದರು. ಮಹಾರಾಜರು ಆ ಹೆಣ್ಣುಮಗಳಿಗೆ ಶ್ರೀ ದತ್ತಾತ್ರೇಯನ ಗುಡಿಯ ಪ್ರದಕ್ಷಿಣೆಯನ್ನು ಮಾಡುವ ಸೇವೆಯನ್ನು ಹೇಳಿದರು. ಆ ಸೇವೆಯಿಂದ ಸ್ವಲ್ಪ ದಿವಸಗಳಲ್ಲಿಯೇ ಆ ಹೆಣ್ಣುಮಗಳಿಗೆ ಸಂಪೂರ್ಣವಾಗಿ ವಾಸಿಯಾಯಿತು. ಮಹಾರಾಜರು ಕೃಷ್ಣಾನದಿಯ ದಂಡೆಗುಂಟ ಸಂಚರಿಸುತ್ತ ಘಟಪ್ರಭೆಯ ಸಂಗಮಕ್ಕೆ ಬಂದರು. ಅವರು ಅಲ್ಲಿ ಶ್ರೀ ನಾರಾಯಣಸ್ವಾಮಿಗಳವರ ಪುಣ್ಯತಿಥಿಯನ್ನು ತೀರಿಸಿಕೊಂಡು ಅಲ್ಲಿಯ ಭಾಯಾಭಗವತಿಯ ದರ್ಶನವನ್ನು ಹೊಂದಿ, 'ಕೋಪರಗಾವ' ಎಂಬ

ಲ್ಲಿಗೆ ಹೋದರು. ಕೋಪರಗಾವಕ್ಕೆ ಮುಟ್ಟಲು, ಮಹಾರಾಜರಿಗೆ ಜ್ವರ ಬಂದವು. ಮುಂದೆ ಎರಡು ದಿನಗಳವರೆಗೆ ಅಲ್ಲಿಯೇ ವಸತಿಯನ್ನು ಮಾಡಿದರೂ ಮಹಾರಾಜರಿಗೆ ಜ್ವರ ಕಡಿಮೆಯಾಗುವ ಲಕ್ಷಣವು ತೋರಲಿಲ್ಲ. ಅವರು ಅದನ್ನು ಲಕ್ಷ್ಯಕ್ಕೆ ತಾರದೆ ಹಾಗೆಯೇ ಮುಂದಕ್ಕೆ ಹೊರಟರು. ಅವರು 'ಗಾಂಡಾಬುವಾ' ಎಂಬ ಶಿಷ್ಯನಿಂದೊಡಗೂಡಿ, ಕೃಷ್ಣಾ-ಭೀಮಾ ನದಿಗಳ ಸಂಗಮದ ನೆರೆಯಲ್ಲಿರುವ ಒಂದು ಹಳ್ಳಿಗೆ ಬಂದರು. ಹಾದಿಯಲ್ಲಿ ಹತ್ತುವ ಹಳ್ಳಿಗಳಲ್ಲಿ ಮಧ್ವಸಾಂಪ್ರದಾಯದ ಬ್ರಾಹ್ಮಣರ ಮನೆಗಳೇ ಇದ್ದುದರಿಂದ, ಅವರು ಭಸ್ಮೋದ್ಧೂಲನದಿಂದ ಒಪ್ಪುವ ಮಹಾರಾಜರನ್ನು ನಿಂದಿಸಿ, ದುರಭಿಮಾನದಿಂದ ಭಿಕ್ಷೆಯನ್ನು ಕೂಡ ಹಾಕಲಿಲ್ಲ. ಇದರಿಂದ ಮಹಾರಾಜರಿಗೆ ಐದು ಉಪೋಷಣಗಳು ಘಟಿಸಿದವು. ಮೈಯಲ್ಲಿಯ ಜ್ವರದಿಂದಲೂ, ಹೊಟ್ಟೆಯಲ್ಲಿ ಅನ್ನವಿಲ್ಲದ್ದರಿಂದಲೂ ಮಹಾರಾಜರು ಬಹಳ ಕಸಿವಿಸಿಪಟ್ಟರು. ಮೇಲೆ ಹೇಳಿದ ಸಂಗಮಸ್ಥಾನದ ಹಳ್ಳಿಗೆ ಬರಲು, ಮಹಾರಾಜರಿಗೆ ಕೆಟ್ಟ ಸಂಕಟವು ಹುಟ್ಟಿತು. ಅವರಿಗೆ ಮಜ್ಜಿಗೆಯನ್ನು ಕುಡಿಯುವ ಅಪೇಕ್ಷೆಯುಂಟಾಯಿತು. ಕೂಡಲೆ ಗಾಂಡಾಬುವಾನು ಊರಲ್ಲಿ ಹೋಗಿ. ಬ್ರಾಹ್ಮಣರ ಮನೆಗಳನ್ನು ವಿಚಾರಿಸಿ, ಹೈನವಿದ್ದ ಒಂದು ಮನೆಯನ್ನು ಗೊತ್ತು ಹಚ್ಚಿ ಮಜ್ಜಿಗೆಯನ್ನು ಯಾಚಿಸಿದನು ಅವನು ಮಜ್ಜಿಗೆ ಬೇಡುವಾಗ ಮಹಾರಾಜರಿಗೆ ಒದಗಿದ ಸ್ಥಿತಿಯನ್ನೆಲ್ಲ ಹೇಳಿದನು. ಅದನ್ನು ಕೇಳಿ ಆ ಮನೆಯ ಹೆಣ್ಣುಮಗಳು ಕನಿಕರಪಟ್ಟು: ಸ್ವಾಮಿ, ಇನ್ನೊಂದು ಕ್ಷಣತಡೆದು ಬಂದರೆ ಅಷ್ಟು ಹೊತ್ತಿಗೆ ಮಜ್ಜಿಗೆಗಳಾಗಿರುತ್ತವೆ. ನಿಮಗೆ ಹತ್ತುವಷ್ಟು ಮಜ್ಜಿಗೆಗಳನ್ನು ಕೊಡುವೆನು, ಎಂದು ನುಡಿದಳು. ಗಾಂಡಾಬುವಾನು ಹಿಗ್ಗಿ ಮಹಾರಾಜರ ಬಳಿಗೆ ಬಂದು, ಮಜ್ಜಿಗೆಯ ಸಂಗತಿಯನ್ನು ಹೇಳಿ, ಬೇಗನೆ ಸ್ನಾನಮಾಡಿಕೊಂಡು ಬರುತ್ತೇನೆಂದು ನದಿಗೆ ಹೋದನು. ಗಾಂಡಾಬುವಾನು ಹೋದಬಳಿಕ ಮಹಾರಾಜರಿಗೆ ಬಹಳ ತಾಪವಾಗಹತ್ತಿತು. ಅವರು ತಾವೇ ಕುಂಬಳಸೊಟ್ಟೆಯನ್ನು ತಕ್ಕೊಂಡು ಮಜ್ಜಿಗೆ ತರುವದಕ್ಕೆ ಹೊರಟರು. ಅವರು ಮಜ್ಜಿಗೆಯನ್ನು ಕೊಡುತ್ತೇನೆಂದು ಹೇಳಿದ ಸ್ತ್ರೀಯ

ಮನೆಯನ್ನು ವಿಚಾರಿಸಿ, ಆ ಮನೆಯ ಬಾಗಿಲಕ್ಕಿದ್ದ ಕಟ್ಟೆಯ ಮೇಲೆ ಹೋಗಿ ಕುಳಿತರು. ಅಷ್ಟರಲ್ಲಿ ಆ ಮನೆಯ ಯಜಮಾನನು ಹೊರಗಿನಿಂದ ಬಂದನು. ಅವನು ಬಾಗಿಲಲ್ಲಿ ಕುಳಿತ ಸಂನ್ಯಾಸಿಯನ್ನು ನೋಡಿ, ಇಲ್ಲಿ ಯಾಕೆ ಕುಳಿತಿರುವಿರೆಂದು ಕೇಳಿದನು. ಅದಕ್ಕೆ ಮಹಾರಾಜರು:—ಈ ಮನೆಯವರು ಮಜ್ಜಿಗೆಯನ್ನು ಕೊಡುತ್ತೇವೆಂದು ಹೇಳಿದ್ದರಿಂದ ಕುಳಿತುಕೊಂಡಿದ್ದೇನೆ, ಎಂದು ಹೇಳಿದರು ಆಗ ಆ ಯಜಮಾನನು ಸಿಟ್ಟಿನಿಂದ:—ಹೋಗು, ನಿಮ್ಮಂಥ ಸಂನ್ಯಾಸಿಗಳಿಗೆ ನಾವು ಏನನ್ನೂ ಕೊಡುವದಿಲ್ಲ, ಎಂದು ಅಂದನು. ಮಹಾರಾಜರು ನಿರುಪಾಯರಾಗಿ ತಿರುಗಿ ಬಂದರು. ಹೀಗೆ ಮಹಾರಾಜರು ಕುಡಿಯಲಿಕ್ಕೆ ಮಜ್ಜಿಗೆ ಸಹ ಸಿಗದೆ ಕಷ್ಟಪಡಬೇಕಾಯಿತು. ದೇಹಧಾರಣ ಮಾಡಿದ ತಪ್ಪಿಗೆ ಒಮ್ಮೊಮ್ಮೆ ಅವತಾರಿಕರಾದರೂ ಕಷ್ಟಪಡಬೇಕಾಗುತ್ತದೆ. ಬಳಿಕ ಕೆಲವು ದಿವಸಗಳ ಮೇಲೆ ಮಹಾರಾಜರ ಜಡ್ಡು ಕಡಿಮೆಯಾಗಿ, ಅವರ ಪ್ರಕೃತಿಯು ಸುಧಾರಿಸಿತು.

ಅನಂತರ ಮಹಾರಾಜರು ಸಂಚರಿಸುತ್ತ 'ಕುರುಗಡ್ಡಿ' ಎಂಬಲ್ಲಿಗೆ ಹೋದರು. ಅಲ್ಲಿಯ ಬ್ರಾಹ್ಮಣರು ಮಡಿ-ಮೈಲಿಗೆಗಳ ವಿಚಾರವಿಲ್ಲದೆ ಶೂದ್ರರಂತೆ ಆಚರಿಸುವದನ್ನು ನೋಡಿ, ಅಲ್ಲಿ ನಿಲ್ಲಬಾರದೆಂದು ಮಹಾರಾಜರು ಯೋಚಿಸಿದರು; ಆದರೆ ಶ್ರೀ ದತ್ತಾತ್ರೇಯನು ಕುರುಗಡ್ಡಿಯಲ್ಲಿಯೇ ನಿಂತು ಚಾತುರ್ಮಾಸ್ಯವನ್ನು ಸಹ ತೀರಿಸಬೇಕೆಂದು ಅಪ್ಪಣೆ ಮಾಡಿದನು. ಆ ಆಜ್ಞೆಯಂತೆ ಮಹಾರಾಜರು ಕುರುಗಡ್ಡೆಯಲ್ಲಿ ವಾಸ ಮಾಡಿದರು. ಮಹಾರಾಜರ ಸಹವಾಸದಿಂದ ಅಲ್ಲಿಯ ಬ್ರಾಹ್ಮಣರು ಸುಧಾರಿಸಿದರು. ಈಚಲಕರಂಜಿಯಿಂದ ಒಬ್ಬ ಬ್ರಹ್ಮಚಾರಿಯು ಮಹಾರಾಜರ ಸೇವೆಗಾಗಿ ಬಂದನು. ಆ ಬ್ರಹ್ಮಚಾರಿಯು ಮಹಾರಾಜರ ಬಳಿಗೆ ಬಂದಕೂಡಲೆ ಬೇನೆಯಿಂದ ಮಲಗಿದನು. ಅವನ ಆ ಬೇನೆಯು ಹೆಚ್ಚುತ್ತ ನಡೆದು, ಅವನು ಬದುಕುವ ಆಶೆಯು ತಪ್ಪಿತು. ಆಗ ಮಹಾರಾಜರು ಯೋಚನೆಯಲ್ಲಿ ಬಿದ್ದರು. ಬ್ರಹ್ಮಚಾರಿಯು ಸತ್ತರೆ, ಅವನ ಶವಸಂಸ್ಕಾರವು ಶಾಸ್ತ್ರಸಮ್ಮತವಾಗಿ ಆಗಬೇಕಾದರೆ, ಅರ್ಕವಿವಾಹಾದಿ ವಿಧಿಗಳು ನೆರವೇರ

ಬೇಕಾದ್ದರಿಂದ, ಆ ವಿಧಿಯನ್ನು ಬಲ್ಲ ಬ್ರಾಹ್ಮಣರು ಅಲ್ಲಿ ಇಲ್ಲದ್ದರಿಂದ ಮಹಾರಾಜರು ಯೋಚಿಸಬೇಕಾಯಿತು. ಮಹಾರಾಜರಿಗೆ ಯಾವ ಕೆಲಸವನ್ನೂ ಅಶಾಸ್ತ್ರವಾಗಿ ಮಾಡಿ ಗೊತ್ತಿಲ್ಲದ್ದರಿಂದ, ಅವರು ಈ ಬ್ರಹ್ಮಚಾರಿಯು ಸತ್ತರೆ ಅಬ್ರಾಹ್ಮಣ್ಯದಿಂದ ಶವಸಂಸ್ಕಾರವ ಮಾಡಿದ ದೋಷವು ಎಲ್ಲಿ ಬಡಕೊಳ್ಳುವದೋ, ಎಂದು ಚಡಪಡಿಸಿದರು. ಬಳಿಕ ಅವರು ಯೋಚಿಸಿ, ಶ್ರೀ ದತ್ತಾತ್ರಯರನ್ನು ಪ್ರಾರ್ಥಿಸಿದರು. ಕೂಡಲೆ ಬ್ರಹ್ಮಚಾರಿಗೆ ಗುಣವಾಯಿತು. ಮಹಾರಾಜರು ಅವನನ್ನು ಅವನ ಊರಿಗೆ ಕಳಿಸಿದರು. ಆ ಬ್ರಹ್ಮಚಾರಿಯು ಊರಿಗೆ ಮುಟ್ಟುವದೊಂದೇ ತಡ, ನಿರ್ನಿಮಿತ್ತವಾಗಿ ಸತ್ತುಹೋದನು! ಮಹಾಂರಾಜರು ಅಶಾಸ್ತ್ರೀಯವಾದ ಕೆಲಸವು ತಮ್ಮಿಂದಾಗಬಾರದೆಂದು ಎಷ್ಟು ಎಚ್ಚರ ಪಡುತ್ತಿದ್ದರೆಂಬದು ಕಲ್ಪನೆಗೆ ಕೂಡ ಮೀರಿದ ಮಾತಾಗಿರುತ್ತದೆ.

ಚಾತುರ್ಮಾಸ್ಯವು ಮುಗಿಯಲು, ಮಹಾರಾಜರು ಬೇರೆ ಕಡೆಗೆ ಹೋಗುವವರಿದ್ದರು. ಅಷ್ಟರಲ್ಲಿ 'ಹರದಾ' ಎಂಬ ಊರಿಂದ ಒಬ್ಬ ಗೃಹಸ್ಥನು ಮಹಾರಾಜರ ಬಳಿಗೆ ಬಂದನು. ಅವನು ಮಹಾರಾಜರ ದರ್ಶನವನ್ನು ತಕ್ಕೊಂಡು:– ಸ್ವಾಮಿ, ನನಗೆ ಅರವತ್ತು ವರ್ಷಗಳಾಗಿ ಹೋದವು. ನನ್ನಿಂದ ಏನಾದರೂ ಪುಣ್ಯಕಾರ್ಯವು ಒದಗಿ, ನನ್ನ ಸಂತತಿಗೆ ಕ್ಷೇಮವಾಗಬೇಕೆಂದು ಇಚ್ಛಿಸುತ್ತೇನೆ. ಗುರುಗಳಾದ ನೀವೇ ನನಗೆ ಏನಾದರೊಂದು ಪುಣ್ಯಕಾರ್ಯವನ್ನು ಮಾಡ ಹೇಳಿ ನನ್ನ ಮನಸ್ಸಿನ ಬಯಕೆಯನ್ನು ಪೂರ್ಣ ಮಾಡಬೇಕು, ಎಂದು ಪ್ರಾರ್ಥಿಸಿದನು. ಅದಕ್ಕೆ ಮಹಾರಾಜರು:– ಅಯ್ಯಾ, ಗೃಹಸ್ಥನೇ; ನೀನು ಸಂತತಿಯ ಕ್ಷೇಮವನ್ನು ಬಯಸುವೆಯಾ? ಹಾಗಾದರೆ ರುದ್ರಸ್ವಾಹಾಕಾರವನ್ನು ಮಾಡು, ಎಂದು ಹೇಳಿದರು. ಆ ಬ್ರಾಹ್ಮಣನು ರುದ್ರಸ್ವಾಹಾಕಾರವನ್ನು ಮಾಡಿಸುತ್ತೇನೆಂದು ಸಂಕಲ್ಪ ಮಾಡಿದನು. ಅಷ್ಟರಲ್ಲಿ ತುಂಬಿದ ಒಂದು ಹುಣಸೀಹಣ್ಣಿನ ಚೀಲವು ಆ ಮುದುಕನ ಮೈಮೇಲೆ ಬಿದ್ದಿತು. ಮೊದಲೇ ವಯಸ್ಸಿನಿಂದ ಅವಸಾನಗೆಟ್ಟ ಆ ಮುದುಕ ಗೃಹಸ್ಥನು, ಕೂಡಲೆ ಮೂರ್ಛೆ ಬಂದು ಬಿದ್ದನು! ರುದ್ರಸ್ವಾಹಾಕಾರವಾಗುವದರೊಳಗೆ ಇವ

ನದೇ ಸ್ವಾಹಾಕಾರವಾಯಿತಲ್ಲವೆಂದು ಜನರು ನುಡಿಯುತ್ತಿರಲು, ಮಹಾರಾಜರು ಅವನನ್ನು ಎಬ್ಬಿಸಿ ಸಾವಧಾನಗೊಳಿಸಿದರು. ಆ ಮುದುಕನಿಗೆ ಏನೂ ಅಪಾಯುವಾಗದೆ ಬದುಕಿಕೊಂಡನು. ಆಗ ಮಹಾರಾಜರು ನೆರೆದ ಜನರನ್ನು ಕುರಿತು:—ನೋಡಿರಿ, ಈ ಮುದುಕನು ಇಂದೇ ಮೃತನಾಗತಕ್ಕವನು; ರುದ್ರಸ್ವಾಹಾಕಾರ ಮಾಡುವೆನೆಂದು ಸಂಕಲ್ಪಿಸಿದ್ದರಿಂದ ಇವನು ಈ ಕುತ್ತದಿಂದ ಪಾರಾದನು. ರುದ್ರಸ್ವಾಹಾಕಾರವು ಆಯುಷ್ಯವನ್ನು ವೃದ್ಧಿಸುತ್ತದೆ, ಎಂದು ನುಡಿದರು. ಅದನ್ನು ಕೇಳಿದ ಜನರು ಆಶ್ಚರ್ಯಪಟ್ಟರು.

ಬಳಿಕ ಮಹಾರಾಜರು ಆ ಗೃಹಸ್ಥನ ಸಂಗಡ ಹೋಗಿ ಅವನಿದ ರುದ್ರಸ್ವಾಹಾಕಾರವನ್ನು ಯಥಾಸಾಂಗವಾಗಿ ನೆರವೇರಿಸಿದರು. ಅಲ್ಲಿಂದ ಮಹಾರಾಜರು ಗೋದಾವರೀ ನದಿಯ ತೀರಕ್ಕೆ ಹೋದರು. 'ಜೋಗಾಯಿ' ಎಂಬದೊಂದು ಪುಣ್ಯಸ್ಥಳವು ಗೋದಾವರೀ ತೀರದಲ್ಲಿರುತ್ತದೆ. ಅಲ್ಲಿ ದಾಸೋಪಂತರೆಂಬ ಒಬ್ಬ ಸತ್ಪುರುಷರು ಹಿಂದಕ್ಕೆ ಆಗಿ ಹೋಗಿರುವರು. ದಾಸೋಪಂತರ ಆರಾಧನೆಯನ್ನು ಒಬ್ಬ ಭಾವಿಕ ಬ್ರಾಹ್ಮಣನು ಪ್ರತಿವರ್ಷದಲ್ಲೂ ಮಾಡುತ್ತಿದ್ದನು. ಅದರಂತೆ ಈ ವರ್ಷವೂ ಆರಾಧನೋತ್ಸವವು ನಡೆದಿರಲು, ಮಹಾರಾಜರು ಆ ಜೋಗಾಯಿಯ ಸಮೀಪಕ್ಕೆ ಹೋದರು. ಮಹಾರಾಜರಂಥ ದೊಡ್ಡ ಸತ್ಪುರುಷರು ಅನಾಯಾಸವಾಗಿ ಹತ್ತರ ಬಂದಿರುವರೆಂದೂ, ಅವರ ದರ್ಶನದಿಂದ ಪಾವನವಾಗಬೇಕೆಂದೂ ಯೋಚಿಸಿ, ಆ ಬ್ರಾಹ್ಮಣನು ಆರಾಧನೆಯನ್ನು ಬಿಟ್ಟು ಮಹಾರಾಜರ ಬಳಿಗೆ ಹೋದನು; ಆದರೆ ಮಹಾರಾಜರು ಅವನಿಗೆ ದರ್ಶನವನ್ನು ಕೊಡಲಿಲ್ಲ. ರಾತ್ರಿಯಲ್ಲಿ ಮಹಾರಾಜರು ಅವನ ಸ್ವಪ್ನದಲ್ಲಿ ಬಂದು:—ಮೂರ್ಖನೇ, ದಾಸೋಪಂತರಂಥ ಮಹಾತ್ಮರ ಉತ್ಸವವನ್ನು ಬಿಟ್ಟು ಇಲ್ಲಿಗೆ ಏತಕ್ಕೆ ಬಂದೆ? ಇಂಥ ಕರ್ತವ್ಯಭ್ರಷ್ಟನೂ, ಅನಿಶ್ಚಿತ ಬುದ್ಧಿಯುವನೂ ಆದ ನಿನಗೆ ನನ್ನ ದರ್ಶನದಿಂದಾದರೂ ಪ್ರಯೋಜನವೇನು? ಇಲ್ಲಿ ನಿನಗೆ ನನ್ನ ದರ್ಶನವಾಗಲಾರದು. ದಾಸೋಪಂತರ ಸೇವೆಯನ್ನು ಏಕನಿಷ್ಠೆಯಿಂದ ಮಾಡಿದರೆ ನೀನು ಉದ್ಧೃತನಾಗುವೆ;

ನಾನು ದಾಸೋಪಂತರಿಂದ ಭಿನ್ನಲ್ಲನಿ, ಎಂದು ನುಡಿದು ಅದೃಶ್ಯರಾದರು. ಮರುದಿನ ಆ ಬ್ರಾಹ್ಮಣನು ಸ್ವಪ್ನದ ಸಂಗತಿಯನ್ನು ತಿಳಿದು ಪಶ್ಚಾತ್ತಾಪ ಪಟ್ಟು, ಜೋಗಾಯಿಗೆ ಹೋಗಿ, ದಾಸೋಪಂತರ ಸಮಾಧಿಗೆ ಕ್ಷಮೆಯನ್ನು ಬೇಡಿಕೊಂಡು, ಆರಾಧನೆಯನ್ನು ಪೂರ್ಣವಾಗಿ ಮಾಡಿದನು.

'ಉಟಗಾವಿ' ಎಂಬಲ್ಲಿಗೆ ಮಹಾರಾಜರು ಹೋಗಲು, ಅಲ್ಲಿಯ ಜನರು ಮಹಾರಾಜರನ್ನು ಬಹಳವಾಗಿ ಪ್ರೀತಿಸಿದರು. ಉಟಗಾವಿಯಲ್ಲಿ ಅಗಸ್ತ್ಯ ಋಷಿಗಳ ಆಶ್ರಮವಿ.ದೆ ಇಂಥ ಪವಿತ್ರ ಸ್ಥಳಕ್ಕೆ ಮಹಾರಾಜರು ಬರಲು, ಅಲ್ಲಿಯೊಬ್ಬ ಧಾರ್ಮಿಕ ಗೃಹಸ್ಥನಿಗೆ ರುದ್ರಸ್ವಾಹಾಕಾರವನ್ನು ಮಾಡಿಸುವ ಸದ್ಬುದ್ಧಿಯು ಹುಟ್ಟಿತು. ಅವನು ಮಹಾರಾಜರ ಅಪ್ಪಣೆಯನ್ನು ಪಡೆದು, ರುದ್ರಸ್ವಾಹಾಕಾರದ ಉಪಕ್ರಮವನ್ನು ಮಾಡಿದನು. ಆ ಗೃಹಸ್ಥನು ಬ್ರಾಹ್ಮಣ ಸಂತರ್ಪಣೆಯಲ್ಲಿ ತೋರಿಸಿದ ಆದರವನ್ನು ಕಂಡು, ಮಹಾರಾಜರಿಗೆ ಅತ್ಯಾನಂದವಾಯಿತು. ಆಗ ಮಹಾರಾಜರು ಕೂಡಿದ ಬ್ರಹ್ಮವೃಂದಕ್ಕೆ ರುದ್ರಸ್ವಾಹಾಕಾರದ ಮಹತ್ವವನ್ನು ಹೇಳಿದರು. ಮಹಾರಾಜರ ದಿವ್ಯವಾಣಿಯಿಂದ ರುದ್ರಸ್ವಾಹಾಕಾರದ ಮಹತ್ವವನ್ನು ಕೇಳಿ ಜನರ ಮನಸ್ಸುಗಳು ಪ್ರಸನ್ನವಾದವು. ಮೇಲೆ ಹೇಳಿದ ಗೃಹಸ್ಥನ ಸ್ವಾಹಾಕಾರವು ಮುಗಿಯಲು, ಮತ್ತೊಬ್ಬ ಗೃಹಸ್ಥನು ರುದ್ರಸ್ವಾಹಾಕಾರವನ್ನು ಮಾಡಿದನು. ಹೀಗೆ ಒಬ್ಬರ ಹಿಂದೆ ಮತ್ತೊಬ್ಬರಂತೆ ಮಾಡುತ್ತ ನಡೆಯಲು, ಆ ಸ್ಥಳದಲ್ಲಿ ಇಪ್ಪತ್ತು ರುದ್ರಸ್ವಾಹಾಕಾರಗಳಾದವು! ರುದ್ರಸ್ವಾಹಾಕಾರದ ವಿಷಯವಾಗಿ ಜನರಲ್ಲಿ ವಿಲಕ್ಷಣವಾದ ಪ್ರೇಮವು ಹುಟ್ಟಿದ್ದನ್ನು ನೋಡಿ ಮಹಾರಾಜರು ಆನಂದಪರವಶರಾದರು.

ಈ ಮೇರೆಗೆ ಮಹಾರಾಜರು ರುದ್ರಸ್ವಾಹಾಕಾರದ ನಿಮಿತ್ತವಾಗಿ ಜನರಿಗೆ ಪುಣ್ಯವನ್ನು ಒದಗಿಸಿಕೊಡುತ್ತ ಗೋದಾತೀರವನ್ನು ಹಿಡಿದು ಪೈಠಣಕ್ಕೆ ಬಂದರು. ಪೈಠಣವು ಸಾಧುವರ್ಯರಾದ ಏಕನಾಥರು ಅವತರಿಸಿದ ಸ್ಥಳವು. ಅಲ್ಲಿ ಏಕನಾಥರು ಒಂದು ಗುಡಿಯನ್ನು ಕಟ್ಟಿಸಿ ದೇವತಾಪ್ರತಿಷ್ಠಾಪನೆಯನ್ನು ಮಾಡಿರುವರು. ಏಕನಾಥ ಸ್ವಾಮಿಗಳ ಪಶ್ಚಾತ್ ಅವರ ಸಂತತಿಯವರು ಆ ಮೂರ್ತಿಯನ್ನು ಕಿತ್ತು ಬೇರೆ

ಕಡೆಗೆ ಸ್ಥಾಪಿಸಲು ಯತ್ನಿಸಿದ್ದರಿಂದ ಅನೇಕ ವಿಘ್ನಗಳು ಒದಗಿ, ಆ ಮೂರ್ತಿಯ ಪ್ರತಿಷ್ಠಾಪನೆಯೇ ಆಗಿದ್ದಿಲ್ಲ. ಮಹಾರಾಜರು ಹೋಗಿ ಆ ಗುಡಿಯನ್ನು ನೋಡಿ:—ಏಕನಾಥ ಸ್ವಾಮಿಗಳು ಸ್ಥಾಪಿಸಿದ ಸ್ಥಳದಲ್ಲಿಯೇ ನೀವು ಮೂರ್ತಿಯನ್ನು ಸ್ಥಾಪಿಸಬೇಕು; ಇಲ್ಲದಿದ್ದರೆ ನಿಮ್ಮ ಸರ್ವಸ್ವವೂ ನಾಶವಾಗುವದು, ಎಂದು ಹೇಳಿದರು. ಆದನ್ನು ಕೇಳಿ, ಏಕನಾಥರ ವಂಶಜರು ಹೆದರಿ, ಅದರಂತೆ ಮಾಡಿದರು. ಮೂರ್ತಿಸ್ಥಾಪನೆಯ ಕೆಲಸವು ನಿರ್ವಿಘ್ನವಾಗಿ ಸಾಂಗವಾಯಿತು. ಬಳಿಕ ಮಹಾರಾಜರು:— ದೊಡ್ಡವರಿಂದ ಆದ ಕೆಲಸದಲ್ಲಿ ಕೈಹಾಕಬಾರದೆಂದು ಅವರಿಗೆ ಹೇಳಿ, ಅಲ್ಲಿಂದ ಮುಂದಕ್ಕೆ ಹೊರಟು ನಡೆದರು.

---

## ಭಕ್ತರ ಆಪನ್ನಿವಾರಣ.

ನರ್ಮದಾ ತೀರದ ಸಮೀಪದಲ್ಲಿ ಜಿಂತುಕರವೆಂಬುದೊಂದು ಹಳ್ಳಿಯಲ್ಲಿ ಒಬ್ಬ ಅಗ್ನಿಹೋತ್ರಿ ಬ್ರಾಹ್ಮಣರಿದ್ದರು. ಇವರ ಸದಾಚರಣಸಂಪನ್ನತೆಯನ್ನೂ, ನಿಸ್ಪೃಹವೃತ್ತಿಯನ್ನೂ ನೋಡಿ, ಮಹಾರಾಜರೇ ಇವರ ಕಡಿಯಿಂದ ಅಗ್ನಿಹೋತ್ರವನ್ನು ಇಡಿಸಿದ್ದರು. ಆ ಕರ್ಮಠ ಬ್ರಾಹ್ಮಣರು ಭಕ್ತಿಪುರಸ್ಸರವಾಗಿ ಅಗ್ನಿಹೋತ್ರವನ್ನು ಪಾಲಿಸಿದರು. ಅವರಿಗೆ ತಾರುಣ್ಯವು ಗತಿಸಿ ಹೋಗಿ ವೃದ್ಧಾಪ್ಯವು ಸಮೀಪಿಸಿತು. ಬಹುಕಾಲದಿಂದ ಅಗ್ನಿನಾರಾಯಣನನ್ನು ಆರಾಧಿಸಿ ಪವಿತ್ರವಾದ ಆ ಬ್ರಾಹ್ಮಣರಲ್ಲಿ, ಮುಪ್ಪಿನ ಕಾಲಕ್ಕೆ ಗಾಯತ್ರೀಪುರಶ್ಚರಣವನ್ನು ಮಾಡುವ ಅಪೇಕ್ಷೆಯುಂಟಾಯಿತು. ಮುಪ್ಪಿನಲ್ಲಿ ಪುರಶ್ಚರಣದಂಥ ದೊಡ್ಡ ಕೆಲಸವು ಹ್ಯಾಗೆ ಸಾಂಗವಾದೀತೆಂದು ಅವರು ಯೋಚಿಸಿದರು. ಶ್ರೀ ಮಹಾರಾಜರು ನರ್ಮದಾ ತೀರದಲ್ಲಿ ಕಾತರಖೇಡಗಾವ ಎಂಬಲ್ಲಿಗೆ ಬರಲು, ಮೇಲೆ ಹೇಳಿದ ಅಗ್ನಿಹೋತ್ರಿಗಳಿಗೆ ಬಹಳ ಸಂತೋಷವಾಯಿತು. ಅವರು ಆ ಕೂಡಲೆ ಮಹಾರಾಜರ ದರ್ಶನಕ್ಕೆ ಹೋದರು. ಮಹಾರಾಜರು ಆ ಅಗ್ನಿಹೋತ್ರಿಗಳ ಮುಖವನ್ನು ನೋಡಿದ ಕೂಡಲೆ: ಯಾಕೆ ಅಗ್ನಿ

ಹೋತ್ರಿಗಳೇ, ಗಾಯತ್ರೀಪುರಶ್ಚರಣ ಮಾಡಬೇಕೆಂದು ಬಯಸುವಿರಾ? ಅವಶ್ಯವಾಗಿ ಮಾಡಿರಿ. ನಿಮ್ಮಂಥ ಸತ್ಪಾತ್ರ ಬ್ರಾಹ್ಮಣರಲ್ಲದೆ, ಅನ್ಯರು ಇಂಥ ಕೆಲಸಲಕ್ಕೆ ಕೈ ಹಾಕಬಹುದೇ? ಎಂದು ನುಡಿದರು. ತಾವು ಇನ್ನೂ ಯಾವ ಸಂಗತಿಯನ್ನೂ ಹೇಳದಿರಲು, ಮಹಾರಾಜರೇ ಎಲ್ಲ ಸಂಗತಿಯನ್ನು ಆಡಿ ಬಿಡಲು, ಅಗ್ನಿಹೋತ್ರಿಗಳಿಗೆ ಪರಮಾಶ್ಚರ್ಯವಾಗಿ, ಅವರು ಭಕ್ತಿಪುರಸ್ಸರವಾಗಿ ಮಹಾರಾಜರನ್ನು ನಮಸ್ಕರಿಸಿದರು. ಬಳಿಕ ಅಗ್ನಿಹೋತ್ರಿಗಳು ಸಂತೋಷದಿಂದ ಮಹಾರಾಜರನ್ನು ಕುರಿತು:— ಗುರುಗಳೇ, ತಾವು ಸರ್ವಜ್ಞರಿದ್ದು, ಪಾಮರನಾದ ನಾನು ಏನನ್ನು ವಿಜ್ಞಾಪಿಸಿಕೊಳ್ಳಲಿ? ನಾನು ಹೇಳುವ ಮೊದಲೇ ತಮಗೆ ಎಲ್ಲವೂ ಗೊತ್ತಾಗಿರುವದು. ತಮ್ಮ ಕೃಪೆಯು ಬಲದಿಂದ ಪ್ರಾರಂಭಿಸಲ್ಪಟ್ಟ ಅಗ್ನಿಹೋತ್ರವು ನಿರ್ವಿಘ್ನದಿಂದ ಸಾಗಿರುತ್ತದೆ. ನಾನು ಈಗ ಮನಸ್ಸಿನಲ್ಲಿ ಮಾಡಿದ ಗಾಯತ್ರೀಪುರಶ್ಚರಣದ ಸಂಕಲ್ಪವಾದರೂ ಮಹಾತ್ಮರಾದ ನಿಮ್ಮ ದಯೆಯಿಂದಲೇ ಕೊನೆಗಾಣುವದು. ನಾನು ಬಡವನು; ಪುರಶ್ಚರಣಕ್ಕೆ ಅನ್ನ ಸಂತರ್ಪಣೆಯು ಬಹಳವಾಗಬೇಕಾಗುತ್ತದೆಂಬದನ್ನು ನಾನು ತಮಗೆ ಹೇಳಬೇಕೆನ್ನುವ ಹಾಗಿಲ್ಲ, ಎಂದು ನುಡಿದರು. ಮಹಾರಾಜರು ಅಗ್ನಿಹೋತ್ರಿಗಳ ಮಾತಿಗೆ ಸಂತೋಷಪಟ್ಟು:— ನೀವು ಯಾವ ಚಿಂತೆಯನ್ನೂ ಮಾಡಬೇಡಿರಿ. ನಿಮ್ಮ ಸತ್ಕಾರ್ಯಕ್ಕೆ ಈಶ್ವರನು ಸಹಾಯ ಮಾಡೇ ಮಾಡುವನು. ಯಥಾಸಾಂಗವಾಗಿ ಅನ್ನಸಂತರ್ಪಣಾದಿಗಳನ್ನ ಮಾಡಿರಿ. ಕಿಂಚಿತ್ ಋಣವಾದರೂ ಚಿಂತೆಯಿಲ್ಲ; ಸತ್ಕಾರ್ಯಕ್ಕಾಗಿ ಮಾಡಿದ ಋಣಭಾರವು ದೇವರ ಮೇಲಿರುತ್ತದೆ, ಎಂದು ಹೇಳಿದರು ಅದನ್ನು ಕೇಳಿ ಅಗ್ನಿಹೋತ್ರಿಗಳು:— ಮಹಾರಾಜ! ತಾವೇ ಪುರಶ್ಚರಣದ ಸಮಾರಂಭಕ್ಕೆ ಬಂದು, ಬಡವನನ್ನು ಉದ್ಧರಿಸುವ ಕೃಪೆ ಮಾಡಬೇಕು, ಎಂದು ಬೇಡಿಕೊಳ್ಳಲು:— "ನಾನು ಬರುತ್ತೇನೆ. ವಿಶ್ವಾಸದಿಂದ ಕಾರ್ಯವನ್ನಾರಂಭಿಸಿರಿ; ಟಾಕಳಕರ ದಾಜಿಬುವಾಜಿಯವರನ್ನೂ ಕರಕೊಂಡು ಬರ್ರಿ" ಎಂದು ಹೇಳಿ, ಮಹಾರಾಜರು ಆ ಅಗ್ನಿಹೋತ್ರಿಗಳನ್ನು ಕಳಿಸಿದರು.

ಈ ಮೇರೆಗೆ ಅಗ್ನಿಹೋತ್ರಿಗಳು ಮಹಾರಾಜರಿಂದ ಅಭಯವನ್ನು ಸಂಪಾದಿಸಿ, ಸ್ವಗ್ರಾಮಕ್ಕೆ ಬಂದು ಅಲ್ಲಿಂದ ಟಾಕಳಿಗೆ ಹೋದರು. ದಾಜೆಬುವಾಜಿಯುವರಿಗೆ ಯಾರೋ ದುಷ್ಟರು ಮಾರಣ ಕ್ರಿಯೆಯಿಂದ ಮೂಲವ್ಯಾಧಿಯನ್ನುಂಟು ಮಾಡಿದ್ದರು. ಅವರು ಆ ವ್ಯಾಧಿಯಿಂದ ಅಶಕ್ತರಾಗಿರಲು, ಮೇಲೆ ಹೇಳಿದಂತೆ ಅಗ್ನಿಹೋತ್ರಿ ಬ್ರಾಹ್ಮಣರು ಅವರನ್ನು ಪುರಶ್ಚರಣದ ಸಮಾರಂಭಕ್ಕೆ ಕರೆಯಬಂದರು. ಆಗ ದಾಜೆಬುವಾಜಿಯುವರು ಆ ಬ್ರಾಹ್ಮಣರ ಮುಂದೆ ತಮ್ಮ ಅವಸ್ಥೆಯನ್ನು ಹೇಳಿ, ಮಹಾರಾಜರ ಅನುಗ್ರಹದಿಂದ ಈ ವ್ಯಾಧಿಯು ನಷ್ಟವಾದರೆ, ನಿಮ್ಮ ಸಮಾರಂಭಕ್ಕೆ ಬರುತ್ತೇನೆಂದು ಅಂದರು. ಅಗ್ನಿಹೋತ್ರಿ ಬ್ರಾಹ್ಮಣರು ಹಾಗೇ ಆಗಲೆಂದು ನುಡಿದು, ತಿರುಗಿ ಊರಿಗೆ ಬಂದರು. ಬಳಿಕ ಅವರು ಮಹಾರಾಜರು ಹೇಳಿಕೊಟ್ಟ ಒಂದು ಶುಭಮುಹೂರ್ತದಲ್ಲಿ ಪುರಶ್ಚರಣಕ್ಕೆ ಪ್ರಾರಂಭಿಸಿದರು. ಮನೆಯಲ್ಲಿ ಯಾವ ಸಾಹಿತ್ಯಗಳೂ ಸಿದ್ಧವಿರದೆ, ಇವರು ಪುರಶ್ಚರಣವನ್ನು ಪ್ರಾರಂಭಿಸಿದ್ದನ್ನು ನೋಡಿ, ಜನರು ಅಪಹಾಸ್ಯ ಮಾಡಹತ್ತಿದರು; ಆದರೆ ಸತ್ಪುರುಷರ ಅಭಯವಚನವನ್ನು ಪಡೆದು, ಕೇವಲ ವಿಶ್ವಾಸದಿಂದ ಕಾರ್ಯವನ್ನಾರಂಭಿಸಿದ ಆ ಸದ್ಭಾವನೆಯ ಬ್ರಾಹ್ಮಣರ ಕಾರ್ಯವು, ಲೋಕವಿಡಂಬನೆಗೆ ಹ್ಯಾಗೆ ಕಾರಣವಾದೀತು?

ಕರ್ಮ-ಧರ್ಮಸಂಯೋಗದಿಂದಲೋ, ಅಥವಾ ಸತ್ಪುರುಷರ ವಚನಪ್ರಭಾವದಿಂದಲೋ, ಅಥವಾ ಸತ್ಕಾರ್ಯದ ಮಹತಿಯಿಂದಲೋ ಅಲ್ಲಿಗೆ ಡೇಹಿ ಎಂಬಲ್ಲಿಯ ಶ್ರೀಮಂತರು ಬಂದರು. ಅವರು ಈ ಅಗ್ನಿಹೋತ್ರಿ ಬ್ರಾಹ್ಮಣರನ್ನು ಕಂಡು ಭಕ್ತಿಪೂರ್ವಕವಾಗಿ ದ್ರವ್ಯಸಹಾಯವನ್ನು ಮಾಡಿದರು. ಹೀಗೆ ಆ ಅಗ್ನಿಹೋತ್ರ ಕಾರ್ಯಕ್ಕೆ ದ್ರವ್ಯಬಲವು ದೊರೆತು ಎಲ್ಲ ಕೊರತೆಗಳು ಪೂರ್ಣವಾಗಲು, ಮಹಾರಾಜರು ಅಲ್ಲಿಗೆ ಬಂದರು. ಅಗ್ನಿಹೋತ್ರಿಗಳು ಎಲ್ಲ ಸಂಗತಿಯನ್ನು ಮಹಾರಾಜರಿಗೆ ಹೇಳಿದರು. ಈ ಮೇರೆಗೆ ಪುರಶ್ಚರಣದ ಕಾರ್ಯವು ಯಥೋಚಿತವಾದ ಅನ್ನಸಂತರ್ಪಣಾದಿಗಳಿಂದ ಸಾಂಗವಾಗುತ್ತ ಬರಲು, ದಾಜಿಬುವಾಜಿ

ಯುವರು ಯಾಕೆ ಬರಲಿಲ್ಲವೆಂದು ಮಹಾರಾಜರು ಜ್ಞಾನದೃಷ್ಟಿಯಿಂ ನೋಡಿದರು. ಬುವಾಜಿಯುವರ ವ್ಯಾಧಿಯು ಕಡಿಮೆಯಾಗಿದ್ದು, ಅವರು ಪುರಶ್ಚರಣದ ಕಾರ್ಯಕ್ಕೆ ಬರುವದನ್ನು ಮರೆತು ಬಿಟ್ಟಂತೆ ಕಂಡು ಬಂದಿತು. ಪೂರ್ಣಾಹುತಿಯು ಮುನ್ನಾದಿವಸ ದಾಜಿಬುವಾಜಿಯುವರು ಗೌತಮೀತೀರದಲ್ಲಿ ಪ್ರಾತಸ್ಸಂಧ್ಯೆಯನ್ನು ಮಾಡುತ್ತ ಕುಳಿತಿರಲು ಅವರಿಗೆ ಹಿಂದಿನಿಂದ "ನಿಮ್ಮ ವ್ಯಾಧಿಯು ಉಪಶಮನವಾಗಿದ್ದರೂ ನೀವು ಪುರಶ್ಚರಣದ ಕಾರ್ಯಕ್ಕೆ ಬರುವದನ್ನು ಯಾಕೆ ಬಿಟ್ಟಿರಿ?" ಎಂದು ಯಾರೋ ಕೇಳಿದ ಹಾಗಾಯಿತು. ಆಗ ಬುವಾಜಿಯುವರು ಬೆಚ್ಚಿಬಿದ್ದು ಹಿಂದಿರುಗಿ ನೋಡಲು. ಯಾರೂ ಕಾಣಿಸಲಿಲ್ಲ. ಮಹಾರಾಜರೇ ತಮ್ಮನ್ನು ಎಚ್ಚರಗೊಳಿಸಿದರೆಂದು ಬುವಾಜಿಯುವರು ತರ್ಕಿಸಿ, ಆ ನದೀತೀರದಿಂ ಹಾಗೆಯೇ ಹೊರಟು ೨೨ ಮೈಲು ದಾರಿಯನ್ನು ನಡೆದು ಜೆಂತುಕರಿ ಬಂದರು. ಅವರು ಅಗ್ನಿಹೋತ್ರಿಗಳನ್ನೂ, ಮಹಾರಾಜರನ್ನೂ ಕಂಡು ಎಲ್ಲರಿಗೂ ತಮ್ಮ ಈ ಸಂಗತಿಯನ್ನು ಹೇಳಿದರು. ಅದನ್ನು ಕೇಳಿ ಜನರು ಆಶ್ಚರ್ಯಪಟ್ಟು, ಪುರಶ್ಚರಣದಂಥ ಮಹಾಸಮಾರಾಧನೆಯ ಪ್ರಸಾದವು ತಮ್ಮ ಪೂರ್ವ ಪುಣ್ಯದಿಂದಲೇ ದೊರಕಿತೆಂದು ಅಂದುಕೊಂಡರು. ಸತ್ಪುರುಷರ ಬೆಂಬಲದಿಂದ ಆ ಅಗ್ನಿಹೋತ್ರಿ ಬ್ರಾಹ್ಮಣರ ಕಾರ್ಯವು ನಿರ್ವಿಘ್ನದಿಂದ ಸಾಂಗವಾಗಲು, ಜನರು ಕೌತುಕಪಡುತ್ತ ಸ್ವಸ್ಥಾನಗಳಿಗೆ ತೆರಳಿದರು. ಆ ಅಗ್ನಿಹೋತ್ರಿ ಬ್ರಾಹ್ಮಣರಿಗಾದ ಆನಂದವನ್ನಂತೂ ವರ್ಣಿಸಲಸದಳವು.

ಬಳಿಕ ಮಹಾರಾಜರು ನರ್ಮದಾತೀರವನ್ನು ಹಿಡಿದು ಸಂಚರಿಸುತ್ತ ನಡೆದರು ಈ ನದೀ ತೀರದ ಒಂದು ಹಳ್ಳಿಯಲ್ಲಿ ಮಹಾರಾಜರ ಪರಮ ಭಕ್ತಳೊಬ್ಬಳು ಇದ್ದಳು. ಆಕೆಯು ಬ್ರಾಹ್ಮಣ ಜಾತಿಯವಳು. ಚಿಕ್ಕಂದಿನಲ್ಲಿಯೇ ಆಕೆಯು ಮಹಾರಾಜರ ಆಖ್ಯಾಯಿಕೆಗಳನ್ನು ಕೇಳಿ ಅವರಲ್ಲಿ ಅಪ್ರತಿಮ ಶ್ರದ್ಧೆಯುಳ್ಳವಳಾಗಿದ್ದಳು. ಮುಂದೆ ಆಕೆಯು ಪ್ರಬುದ್ಧಳಾಗಿ ಗಂಡನ ಮನೆಗೆ ಹೋಗಲು, ಆಕೆಯು ಕುರೂಪಿಯೆಂದು ಆಕೆಯ ಗಂಡನು ಮತ್ತೊಂದು ಲಗ್ನವಾದನು. ಅವನು ಚಲುವೆಯಾ

ಎರಡನೇ ಹೆಂಡತಿಯ ಮಾತು ಕೇಳಿ ಈಕೆಯನ್ನು ಹೊರಗೆ ಹಾಕಿ, ಹೊಟ್ಟೆಯ ಮಟ್ಟಿಗೆ ಒಂದು ಹೊಲವನ್ನು ಕೊಟ್ಟನು. ಆ ಹೆಣ್ಣು ಮಗಳು ತನ್ನ ದುರ್ದೈವವನ್ನು ಹಳಿದುಕೊಂಡು, ಕಷ್ಟದಿಂದ ಕಾಲಹರಣ ಮಾಡುತ್ತಿದ್ದಳು. ಆಕೆಯು ಪರಮ ಸಾಧ್ವಿಯಾದ್ದರಿಂದ, ಸವತಿಗೆ ಯಾವ ಬಗೆಯ ದೋಷವನ್ನೂ ಕೊಡದೆ ಗಂಡನನ್ನು ಧ್ಯಾನಿಸುತ್ತ ಇರುತ್ತಿದ್ದಳು. ಆಕೆಗೆ ಗಂಡನು ಕೊಟ್ಟಿದ್ದ ಹೊಲವೇ ಜೀವನಾಧಾರವು. ಆಕೆಯು ಆ ಹೊಲವನ್ನು ಕೋರಿಗೆ ಕೊಟ್ಟಿದ್ದು, ಬಂದ ಕಾಳು-ಕಡಿಗಳಲ್ಲಿ ಉಪಜೀವನ ಸಾಗಿಸುತ್ತಿದ್ದಳು. ಆಕೆಯು ಅಂಥ ವಿಪನ್ನ ಸ್ಥಿತಿಯಲ್ಲಿಯೂ ಅತಿಥಿಗಳಿಗೆ ಅನ್ನೋದಕಗಳನ್ನು ಕೊಡುತ್ತಿದ್ದಳು. ಆಕೆಯು ಒಂದೆರಡು ಸಾರೆ ಮಹಾರಾಜರ ದರ್ಶನವನ್ನು ತಕ್ಕೊಂಡಿದ್ದು, ಅವರ ಚರಣಧೂಳಿಯನ್ನು ಸಂಗ್ರಹಿಸಿ ಹತ್ತರ ಇಟ್ಟುಕೊಂಡಿದ್ದಳು. ಹೀಗೆ ಆಕೆಯು ಕಾಲಹರಣ ಮಾಡುತ್ತಿರಲು, ಒಂದು ವರ್ಷ ದುಷ್ಕಾಳಬಿದ್ದಿತು. ವರ್ಷದ ಸಂಗ್ರಹವೇ ವರ್ಷಕ್ಕೆ ಆಗದಿರಲು, ದುಷ್ಕಾಳವು ಬೀಳುವದೆಂದು ತಿಳಿಯಲು ಆ ಹೆಣ್ಣುಮಗಳು ಬಹಳ ಚಿಂತಿಸಿದಳು. ಆಕೆಯು ಒಂದು ದಿನ ತನ್ನ ಹೊಲಕ್ಕೆ ಹೋಗಿ ಅಲ್ಲಿ ಮಹಾರಾಜರ ಪಾದಧೂಲಿಯನ್ನು ಹಾಕಿ: ಗುರುಮಹಾರಾಜನೇ, ಈ ಅನಾಥಳನ್ನು ಅನ್ನಾನ್ನಗತಿಕಳನ್ನಾಗಿ ಮಾಡಬೇಡ, ಎಂದು ಬೇಡಿಕೊಂಡು, ಶ್ರೀ ಮಹಾರಾಜರನ್ನು ಪ್ರಾರ್ಥಿಸುತ್ತ ಮನೆಗೆ ಬಂದಳು. ಆ ಹೆಣ್ಣುಮಗಳಿಗೆ ಬೇರೆ ಆಪ್ತರಾರೂ ಇಲ್ಲದ್ದರಿಂದ, ಆಕೆಯ ಸಂರಕ್ಷಣವು ಆ ಹೊಲದ ಹೊರತು ಆಗುವ ಹಾಗಿದ್ದಿಲ್ಲ. ಅಂತೇ ಅವಳು ಹಗಲಿರುಳು ಮಹಾರಾಜರನ್ನು ಪ್ರಾರ್ಥಿಸುತ್ತಿದ್ದಳು. ಚಿಕ್ಕಂದಿನಿಂದಲೇ ಪರಮಭಕ್ತಳೂ, ಭಾವಿಕಳೂ, ಒಳ್ಳೇ ಸಾಧ್ವಿಯೂ ಆಗಿದ್ದ ಆ ಹೆಣ್ಣುಮಗಳ ಪ್ರಾರ್ಥನೆಯನ್ನು ಪೂರ್ಣಪಡಿಸದೆ ಇರುವದು ಮಹಾರಾಜರಿಗೆ ಅಶಕ್ಯವಾಯಿತು. ಅವರು ಶ್ರೀದತ್ತನನ್ನು ಪ್ರಾರ್ಥಿಸಿ, ಆ ಸಾಧ್ವಿಯ ಹೊಲವು ಅರೆವಾಸಿಯಾದರೂ ಬೆಳೆಯುವಂತೆ ಮಾಡಬೇಕೆಂದು ಯೋಚಿಸಿದರು. ಭಗವಲ್ಲೀಲೆಯಿಂದ ಆ ಸಾಧ್ವಿಯ ಹೊಲವು ಆ ವರ್ಷ ಸಂಪೂರ್ಣ ಬೆಳೆಯನ್ನು ಕೊಟ್ಟಿತು. ಉಳಿದ ಜನರ

ಹೊಲಗಳಿಂದ ಬಿತ್ತಿದ ಬೀಜಗಳು ತಿರುಗುವದೇ ದುರ್ಘಟವಾಗಿರಲು, ಈ ಹೆಣ್ಣುಮಗಳ ಹೊಲದಲ್ಲಿ ಒಳ್ಳೇ ಬೆಳೆ ಬಂದದ್ದಕ್ಕೆ ಇಡಿ ಊರ ಜನರಿಗೆ ಆಶ್ಚರ್ಯವಾಯಿತು. ಈ ಸಾಧ್ವಿಯು ಮೇಲೆ ಭಗವತ್ಕೃಪೆಯಿರುವದೆಂದು ಜನರು ನಿಶ್ಚಯಿಸಿದರು. ಮಹಾರಾಜರು ತನ್ನ ಪ್ರಾರ್ಥನೆಯನ್ನು ಕೇಳಿದರೆಂದು ಒಳ್ಳೇ ಆನಂದಭರಿತಳಾಗಿ, ಮಹಾರಾಜರ ದರ್ಶನವನ್ನು ತಕ್ಕೊಂಡು, ಅವರಿಗೆ ಭಿಕ್ಷೆ ಮಾಡಿಸಿ, ಅನಂತರ ಹೊಸ ಧಾನ್ಯವನ್ನು ತಿನ್ನಬೇಕೆಂದು ಆ ಸಾಧ್ವಿಯು ಯೋಚಿಸಿದಳು. ಹಳೇ ಧಾನ್ಯಗಳು ತೀರಿ ಹೋಗಿ ಆಕೆಯು ನಿರಾಹಾರ ಮಾಡಹತ್ತಿದಳು. ಆಕೆಯು ಮಂದಿಯ ಮನೆಯಲ್ಲಿ ಕಡವನ್ನು ತಂದು ಚರಿತಾರ್ಥವನ್ನು ಸಾಗಿಸಿಕೊಳ್ಳಲಿಲ್ಲ; ಮಹಾರಾಜರ ದರ್ಶನವಾಗುವವರೆಗೆ ಊಟ ಮಾಡಲಿಕ್ಕಿಲ್ಲೆಂದು ಆಕೆಯು ನಿಶ್ಚಯಿಸಿದಳು. ನಾಲ್ಕೈದು ದಿನಗಳು ಕಳೆದು ಹೋದರೂ, ಆ ಸಾಧ್ವಿಯು ಬಾಯಲ್ಲಿ ನೀರನ್ನು ಸಹ ಹಾಕಲಿಲ್ಲ. ಆಕೆಯ ಏಕನಿಷ್ಠಭಕ್ತಿಯಿಂದ ಮಹಾರಾಜರು ಸಂತುಷ್ಟರಾಗಿ, ಸಂಚರಿಸುತ್ತ ಒಂದು ದಿನ ಆಕೆಯ ಮನೆಗೆ ಬಂದರು. ದರಿದ್ರನಿಗೆ ನಿಧಿಯು ಸಿಕ್ಕಂತೆ ಆ ಸಾಧ್ವಿಯು ಸಂತುಷ್ಟಳಾಗಿ, ಮಹಾರಾಜರ ಚರಣಗಳನ್ನು ಗಟ್ಟಿಯಾಗಿ ಹಿಡಿದುಕೊಂಡಳು. ಬಳಿಕ ಆ ಸಾಧ್ವಿಯು ಲಗುಬಗೆಯಿಂದ ಅಡಿಗೆ ಮಾಡಿ, ಮಹಾರಾಜರಿಗೆ ಭಿಕ್ಷೆಯನ್ನು ಸಮರ್ಪಿಸಿ, ಅಂದು ಪಾರಣೆಯನ್ನು ಮಾಡಿದಳು. ಆಕೆಯು ಶೀಲ-ಸ್ವಭಾವಗಳಿಂದ ಮಹಾರಾಜರು ಸಂತುಷ್ಟರಾಗಿ ಅದೇ ಊರಲ್ಲಿದ್ದ ಆಕೆಯ ಗಂಡನನ್ನು ಕರೆಯಿಸಿ:—"ಈ ಹೆಂಡತಿಯ ಸಂಗಡ ನೀನು ಪ್ರಪಂಚ ಮಾಡದಿದ್ದರೆ, ನಿನ್ನ ಸರ್ವಸ್ವವೂ ನಾಶಹೊಂದುವದು," ಎಂದು ಹೇಳಿದರು. ಆಗ ಅವನು ಅಂಜಿ, ಮಹಾರಾಜರ ಕ್ಷಮೆಯನ್ನು ಬೇಡಿಕೊಂಡು, ಆ ಸಾಧ್ವಿಯನ್ನು ಮನೆಗೆ ಕರಕೊಂಡು ಹೋಗಿ, ಚೆನ್ನಾಗಿ ಪ್ರಪಂಚ ಮಾಡಹತ್ತಿದನು. ಈ ಮೇರೆಗೆ ಆ ಸಾಧ್ವಿಯು ಸದ್ಗುಣಗಳಿಂದಲೂ, ಭಕ್ತಿಯಿಂದಲೂ ಮಹಾರಾಜರ ಅನುಗ್ರಹಕ್ಕೆ ಪಾತ್ರಳಾಗಿ, ಪತಿಸುಖವನ್ನು ಹೊಂದಿ, ಸಮಾಧಾನದಿಂದ

ಸಂಸಾರ ಮಾಡಿಕೊಂಡು ಇರಹತ್ತಿದಳು. ಸತ್ಪುರುಷರ ಸೇವೆಯು ಫಲವು ವ್ಯರ್ಥವಾಗಿ ಹೋಗಬಹುದೋ?

---

## ನಿರ್ಯಾಣ.

ಈ ಮೇರೆಗೆ ಮಹಾರಾಜರು ಭಕ್ತರ ಯೋಗಕ್ಷೇಮವನ್ನು ತಕೊಳ್ಳುತ್ತ ಸಂಚರಿಸುತ್ತಿರಲು, ಒಂದು ದಿನ ಕುರವಪುರದಲ್ಲಿ ವಸತಿಯನ್ನು ಮಾಡಿದರು. ಮಧ್ಯಾಹ್ನದಲ್ಲಿ ಮಹಾರಾಜರು ಸ್ನಾನಕ್ಕೆ ಹೊರಟಾಗ ಒಂದು ಕಾಗೆಯು ದಿಟ್ಟತನದಿಂದ ಬಂದು, ಅವರ ತಲೆಯ ಮೇಲೆ ಕುಳಿತು, ತನ್ನ ಚುಂಚುವಿನಿಂದ ಮೂರು ಸಾರೆ ಕುಕ್ಕಿತು. ಹೀಗೆ ಚಾಂಡಾಲ ಪಕ್ಷಿಯಾದ ಕಾಗೆಯು ತಮ್ಮ ತಲೆಯನ್ನು ಕುಕ್ಕಿ ಓಡಿ ಹೋಗಲು, ಮಹಾರಾಜರು ತಮ್ಮ ಸಂಗಡ ಇದ್ದ ಜನರಿಗೆ:—"ನಮ್ಮ ಆಯುಷ್ಯವು ಸಮೀಪಿಸಿತು. ಕಾಗಿಯು ಮನುಷ್ಯನ ನೆತ್ತಿಯನ್ನು ಕುಕ್ಕಿದರೆ, ಅವನು ಆರು ತಿಂಗಳಲ್ಲಿ ಮರಣ ಹೊಂದುವನು. ನಾವು ಇನ್ನು ಬಹಳ ದಿವಸ ಬದುಕಲಾರೆವು. ಈ ಅಶುಭ ಚಿಹ್ನವು ನಮ್ಮ ದೇಹಾವಸಾನವನ್ನು ತೋರಿಸುತ್ತದೆ," ಎಂದು ನುಡಿದರು. ಕಾಗೆಯು ಮಹಾರಾಜರ ನೆತ್ತಿಯನ್ನು ಕುಕ್ಕಿದ್ದನ್ನು ನೋಡಿದ್ದರಿಂದಲೂ, ಅವರು ಹೀಗೆ ಹೇಳಿದ್ದರಿಂದಲೂ ಅವರ ಶಿಷ್ಯಮಂಡಲಕ್ಕೆ ಬಹಳ ವಿಷಾದವೆನಿಸಿತು. ಮಹಾರಾಜರ ವಿಯೋಗವು ಆಗುವದೆಂದು ತಿಳಿದ ಆ ಜನರಿಗೆ ಆ ಇಡಿಯ ದಿನವೇ ಅಸಮಾಧಾನದಲ್ಲಿ ಕಳೆದು ಹೋಯಿತು. ಹೀಗೆ ಶಿಷ್ಯ ಮಂಡಳಿಯು ಖಿನ್ನತೆಯನ್ನು ಪ್ರಕಟಿಸಿದ್ದನ್ನು ನೋಡಿ ಮಹಾರಾಜರು:—"ನಶ್ವರವಾದ ನನ್ನ ಶರೀರದ ಬಗ್ಗೆ ನೀವು ಇಷ್ಟೇಕೆ ಚಿಂತೆ ಮಾಡುವಿರಿ? ನನ್ನ ಮೇಲೆ ಇನ್ನು ಯಾರೂ ಪ್ರೇಮ ಮಾಡಬೇಡಿರಿ. ನನ್ನ ಮೇಲೆ ನಿಮ್ಮ ವೃಥಾ ವ್ಯಾಮೋಹವು ಬೆಳೆದರೆ, ನಾನೊಬ್ಬನು ನಿಮಗೆ ವಿಷಯ ಸದೃಶನಾಗಿ ಪರಿಣಮಿಸಬೇಕಾದೀತು? ಆದ್ದರಿಂದ ನನ್ನ ವಿಷಯಕ್ಕೆ ವ್ಯಸನಪಡುವ ಹುಚ್ಚಿಗೆ ನೀವು ಹೋಗಬೇಡಿರಿ" ಎಂದು ಉಪದೇಶಿಸಿದರು.

ಅಸ್ಪರ್ಶವಸ್ತುವಿನ ಸ್ಪರ್ಶವಾದರೆ ಸ್ನಾನವನ್ನೂ, ಪ್ರಾಯಶ್ಚಿತ್ತವನ್ನೂ ಮಾಡಿಕೊಳ್ಳಬೇಕಾಗುತ್ತಿದೆಯೆಷ್ಟೇ; ಅದರಂತೆ ಮಹಾರಾಜರು ಕಾಗೆಯು ತಮ್ಮ ದೇಹವನ್ನು ಸ್ಪರ್ಶ ಮಾಡಿದ್ದಕ್ಕಾಗಿ ಗೋದಾವರೀ ಸ್ನಾನಕ್ಕೆ ಹೋದರು. ಅವರು ವೇನಸಂಗಮದಲ್ಲಿ ಸ್ನಾನಮಾಡಿ, ಪರಳಿ ಗ್ರಾಮದಲ್ಲಿರುವ ಜ್ಯೋತಿರ್ಲಿಂಗದ ದರ್ಶನವನ್ನು ತಕ್ಕೊಂಡು ಸಂಚರಿಸುತ್ತ 'ಚಾಳೀಸಗಾವ' ಎಂಬಲ್ಲಿಗೆ ಬಂದರು. ಸಂಗಡ ಗಾಂಡಾಬುವಾ ಎಂಬ ಶಿಷ್ಯರು ಇದ್ದರು. ಆಗ ಮಹಾರಾಜರು ಗಾಂಡಾಬುವಾನವರನ್ನು ಕುರಿತು:—"ನೀವು ಇನ್ನು ಮೇಲೆ ನನ್ನ ಸಂಗಡ ತಿರುಗಬಾರದು. ಇದೇ ಗೊಂದಲದಲ್ಲಿಯೇ ಕಾಲಕಳೆಯುತ್ತ ಹೋದರೆ, ಬ್ರಹ್ಮದೇವರಷ್ಟು ಆಯುಷ್ಯವಿದ್ದರೂ ಸಾಲಲಿಕ್ಕಿಲ್ಲ. ನಾನು ಒಂದು ಏಕಾಂತ ಸ್ಥಳದಲ್ಲಿ ಇರಬೇಕೆಂದು ಬಯಸುತ್ತೇನೆ. ನನ್ನ ಸಂಗಡ ಯಾರೂ ಇರಕೂಡದು; ಆದ್ದರಿಂದ ನೀವು ಭಡೋಚ ಪಟ್ಟಣದಲ್ಲಿ ವಾಸಮಾಡಿ, ಬ್ರಹ್ಮಚಿಂತನವನ್ನು ಮಾಡಿರಿ. ಜನರ ಉಪಾಧಿಯನ್ನು ಹಚ್ಚಿಕೊಳ್ಳಬೇಡಿರಿ. ದೇಹಾಭಿಮಾನವನ್ನು ಹಿಡಿಯಬೇಡಿರಿ. ನೀವು ಮನೆ-ಮಾರುಗಳನ್ನು ತ್ಯಾಗಮಾಡಿ ಬಂದದ್ದರ ಸಾರ್ಥಕವು ಇನ್ನೂ ಆಗಿಲ್ಲ. ಜಗತ್ತೆಲ್ಲ ಬ್ರಹ್ಮಮಯವಾಗಿ ನಿಮಗೆ ತೋರಿದಾಗ, ಅದರ ಸಾಫಲ್ಯವಾಗುವದು. ನೀವು ಇದನ್ನು ಲಕ್ಷ್ಯದಲ್ಲಿಟ್ಟುಕೊಂಡು ನಡೆಯಿರಿ. ನಿಮ್ಮ ಸ್ಥಿತಿ-ಗತಿಗಳ ವಿಚಾರವನ್ನು ನೀವು ಮಾಡಿಕೊಳ್ಳದಿದ್ದರೆ, ಹಿಂದಿನಿಂದ ಪಶ್ಚಾತ್ತಾಪಪಡುವ ಪ್ರಸಂಗವು ನಿಮಗೆ ಬಂದೀತು! ನಾನು ನರ್ಮದಾ ತೀರಕ್ಕೆ ಹೊರಟು ಹೋಗುತ್ತೇನೆ" ಎಂದು ನುಡಿದರು. ಬಳಿಕ ಮಹಾರಾಜರು ನರ್ಮದಾ ತೀರಕ್ಕೆ ದಯಮಾಡಿಸಿ, ಒಂದು ಗ್ರಾಮದಲ್ಲಿ ವಸತಿಯನ್ನು ಮಾಡಿದರು.

ಮಹಾರಾಜರ ಪ್ರಕೃತಿಯು ಅಶಕ್ತವಾಗುತ್ತ ನಡೆಯಿತು. ಅದನ್ನು ನೋಡಿ ಭಕ್ತಮಂಡಲಿಯು ಮಹಾರಾಜರನ್ನು ಕುರಿತು: ಸ್ವಾಮಿ, ದೇಹವು ಕ್ಷೀಣವಾಗುತ್ತ ನಡೆಯಿತು; ಆದ್ದರಿಂದ ಏನಾದರೊಂದು ಔಷಧಿಯನ್ನು ಸೇವಿಸಿ ಪ್ರಕೃತಿಯನ್ನು ಸುಧಾರಿಸಿಕೊಂಡರೆ, ನಮಗೆ ಆನಂದ

ವಾಗುತ್ತದೆ, ಎಂದು ಅನ್ನಹತ್ತಿತು. ಅದಕ್ಕೆ ಮಹಾರಾಜರು:—"ಈ ಶರೀರವು ಹುಟ್ಟಿಬಂದು ಅರವತ್ತು ವರ್ಷಗಳಾದವು. ಇನ್ನು ಮೇಲೆ ಇದನ್ನು ಜತನದಿಂದ ಇಟ್ಟು ಮಾಡುವದೇನು? ಶ್ರೀಮಚ್ಛಂಕರ ಭಗವತ್ಪಾದಾಚಾರ್ಯರವರು ೩೨ ವರ್ಷಕ್ಕಿಂತ ಹೆಚ್ಚು ಕಾಲವಿರಲಿಲ್ಲ. ಆ ಮಾನದಿಂದ ನೋಡಿದರೆ, ಈ ಶರೀರವು ಬಹಳ ದಿವಸ ಉಳಿದ ಹಾಗಾಯಿತು. ಅಪ್ಪಗಳಿರಾ, ಇನ್ನು ಮುಂದೆ ಈ ಶರೀರಕ್ಕೆ ಔಷಧಾದಿಗಳ ಪ್ರಯೋಜನವಿಲ್ಲ; ಈ ದೇಹಕ್ಕೆ ಎರಡು ಸಾರೆ ಸರ್ಪದಂಶವೂ, ಮೂರು ಸಾರೆ ಮಾರಿಕಾಬೇನೆಯೂ, ಒಂದು ಸಾರೆ ಸನ್ನಿಪಾತವೂ, ಎರಡು ಸಾರೆ ಮಹಾವ್ಯಾಧಿಯೂ, ಒಮ್ಮೆ ಕುಷ್ಟರೋಗವೂ ಸಂಘಟಿಸಿರುತ್ತವೆ. ಇಷ್ಟು ರೋಗಗಳನ್ನು ಅನುಭವಿಸುವಾಗ ಈ ದೇಹಕ್ಕೆ ಯಾರು ಔಷಧವನ್ನು ಕೊಟ್ಟರು? ನಾನು ಹುಟ್ಟಿದಾರಭ್ಯ ಯಾವ ವೈದ್ಯನಿಗೆ ಶರಣು ಹೋಗಿರುತ್ತೇನೋ, ಅದೇ ವೈದ್ಯನು ಈಗಲೂ ಇರುತ್ತಾನೆ, ಎಂದು ನುಡಿದರು. ಮಹಾರಾಜರ ಈ ಮಾತುಗಳನ್ನು ಕೇಳಿ ಜನರು ನಿರುತ್ತರರಾದರು.

ಮಹಾರಾಜರ ಶಿಷ್ಯರಲ್ಲಿ ಒಬ್ಬರಾದ ಗಾಂಡಾಬುವಾ ಎಂಬವರು ಬ್ರಹ್ಮಚಿಂತನೆಗಾಗಿ ಭಡೋಚಕ್ಕೆ ಹೋದರೆಂದು ಮೇಲೆ ಹೇಳಿದೆಯಷ್ಟೇ? ಮಹಾರಾಜರಿಗೆ ಜಡ್ಡು ಬಹಳವಾದದ್ದನ್ನು ಕೇಳಿ, ಅವರು ಮಹಾರಾಜರ ದರ್ಶನಕ್ಕೆ ಬರುವ ಮನಸ್ಸು ಮಾಡಿ, ಅದರಂತೆ ಟೇಲೂಶಾಸ್ತ್ರಿಗಳೆಂಬವರ ಸಂಗಡ ಮಹಾರಾಜರಿಗೆ ಹೇಳಿ ಕಳಿಸಿದರು. ಮಹಾರಾಜರು ಅದನ್ನು ಕೇಳಿ:—ಶಾಸ್ತ್ರಿಗಳೇ, ನನಗೆ ಯಾವ ಶಿಷ್ಯರ ಭೆಟ್ಟಿಯೂ ಬೇಕಾಗಿಲ್ಲ. ನೀವು ಗಾಂಡಾಬುವಾನಿಗೆ ಹೇಳವದಿಷ್ಟೇ: "ನನ್ನ ಸಲುವಾಗಿ ಯಾವ ಚಿಂತೆಯನ್ನೂ ಮಾಡಬಾರದು. ಇದ್ದ ಸ್ಥಳದಲ್ಲಿಯೇ ಸಮಾಧಾನದಿಂದ ಇರಬೇಕು. ಕದಾಚಿತ್ ನಾನು ಸತ್ತರೆ, ನಿಮ್ಮ ಹೆಸರನ್ನು ಬರೆದು ಇಟ್ಟೇನು;" ಈ ಪ್ರಕಾರ ಈ ಮೂರು ಮಾತುಗಳನ್ನು ನಾನು ಹೇಳಿದೆನೆಂದು ಗಾಂಡಾಬುವಾನಿಗೆ ತಿಳಿಸಿರಿ, ಎಂದು ನುಡಿದರು. ಟೇಲೂಶಾಸ್ತ್ರಿಗಳು ಮಹಾರಾಜರ ಈ ಮಾತುಗಳನ್ನು ಕೇಳಿ ಗಾಬರಿಯಾದರು.

ಯಾಕೋ ಮಹಾರಾಜರು ಶಿಷ್ಯರ ಮೇಲೆ ಕುಪಿತರಾಗಿರುವರೆಂದು ತಿಳಿದರು; ಆದರೆ ಮಾಡುತ್ತಾರೇನು? ಸುಮ್ಮನೆ ಮಹಾರಾಜರನ್ನು ನಮಸ್ಕರಿಸಿ, ಭಡೋಚಕ್ಕೆ ಹೋದರು. ಅವರ ಮನಸ್ಸಿನಲ್ಲಿ ಗಾಂಡಾಬುವಾನವರಿಗೆ ಮಹಾರಾಜರ ಈ ನಿರೂಪವನ್ನು ತಿಳಿಸಬೇಕೋ, ತಿಳಿಸಬಾರದೋ ಎಂಬದಾಗಿ ಬಹಳ ಆಲೋಚನೆಯು ಬಿದ್ದಿತು. ಕಡೆಗೆ ಅವರು ಹೇಳುವದನ್ನೇ ನಿಶ್ಚಯಿಸಿ, ಬುವಾನವರ ಕಡೆಗೆ ಹೋದರು. ಗಾಂಡಾಬುವಾನವರಿಗೆ ಮಹಾರಾಜರು ಕಳಿಸಿದ ನಿರೂಪವನ್ನು ಕೇಳಿ ನಗೆಯು ಬಂದಿತು. ಹೀಗೆ ಬುವಾನವರು ನಗಹತ್ತಲು, ಶಾಸ್ತ್ರಿಗಳವರು ವಿಸ್ಮಯಪಟ್ಟು:—ಗಾಂಡಾಬುವಾಜೀ, ಮಹಾರಾಜರು ಸಿಟ್ಟಿನಿಂದ ಕಳಿಸಿದ ಉತ್ತರವನ್ನು ಕೇಳಿ ನೀವು ನಗುತ್ತಿರುವಿರಲ್ಲ? ಇದೇನು? ಎಂದು ಕೇಳಲು, ಬುವಾಜಿಯವರು:—ಶಾಸ್ತ್ರಿಗಳೇ, ಶ್ರೀ ಗುರುಗಳ ಈ ಆಜ್ಞೆಯಲ್ಲಿ ಟೆಂಗಿನಕಾಯಿಯಂತೆ ಬಹು ಸ್ವಾದವಿರುತ್ತದೆ. ಟೆಂಗಿನಕಾಯಿಯ ಚಿಪ್ಪು ನಿರುಪಯೋಗಿಯಾಗಿ ಕಂಡರೂ, ಒಳಗಿನ ಕೊಬ್ಬರಿಯು ಮಾಧುರ್ಯಪೂರ್ಣವಾಗಿರುವಂತೆ, ಈ ನಿರೂಪದಲ್ಲಿ ಮಾಧುರ್ಯವಿರುತ್ತದೆ. ಶ್ರೀ ಗುರುಗಳ ಈ ಆಜ್ಞೆಯ ರಹಸ್ಯವೇನಂದರೆ:—ನೀನು ಸ್ವಸ್ಥವಾಗಿರು; ಆತ್ಮಾನಾತ್ಮ ವಿಚಾರ ಮಾಡು; ನನ್ನಲ್ಲಿ ನಿನ್ನ ಪಾಲು ಇರುತ್ತದೆ. ನಿನ್ನ ಜಡ ಶರೀರದಿಂದ ದೂರವಾಗಿದ್ದರೇನು? ಸಮೀಪವಾಗಿ ಇದ್ದರೇನು? ಅದರ ಬಗ್ಗೆ ಅಸಮಾಧಾನಪಡಬೇಡ. ಶ್ರೀ ಗುರುಗಳು ಪೂರ್ಣಬ್ರಹ್ಮಸ್ವರೂಪರಾಗಿದ್ದು, ಅವರು ಮೃತ್ಯುವಿನ ಮಸ್ತಕದ ಮೇಲೆ ಕುಳಿತಿರುತ್ತಾರೆ. ಅಜ್ಞಾನವಿದ್ದದರಿಂದ ನನ್ನಲ್ಲಿ ಮೃತ್ಯುವು ವಾಸಮಾಡಿರುತ್ತದೆ. ಅದಕ್ಕಾಗಿಯೇ ಸದ್ಗುರುವು ಈ ಅಪ್ಪಣೆಯನ್ನು ದಯಪಾಲಿಸಿದ್ದಾನೆ.''

ಈ ಮೇರೆಗೆ ಗಾಂಡಾಬುವಾನು ನುಡಿಯಲು, ಶಾಸ್ತ್ರಿಗಳು ಸಮಾಧಾನಪಟ್ಟು, ತಮ್ಮ ಮನೆಗೆ ಹೊರಟು ಹೋದರು. ಇತ್ತ ನರ್ಮದಾತೀರದಲ್ಲಿ ಮಹಾರಾಜರ ಪ್ರಕೃತಿಯು ಕ್ಷೀಣಿಸುತ್ತ ಹೋಗಿ ಅವರಿಗೆ ಅತಿಸಾರವಾಯಿತು. ಅತಿಸಾರದ ಉಪದ್ರವವು ಹೆಚ್ಚಾಗಲು, ಮಹಾರಾಜರು ಶ್ರೀ ದತ್ತಭಗವಾನನನ್ನು ಕುರಿತು ಪ್ರಾರ್ಥಿಸಿದ್ದೇನಂದರೆ:—

"ಈ ನಿಮ್ಮ ಮೂರ್ತಿಯನ್ನು ನರಸೋಬನವಾಡಿಗೆ ಕಳಿಸಬೇಕೋ ಅಥವಾ ಬೇರೆ ಯಾವ ಕಡೆಗಾದರೂ ಕಳಿಸಬೇಕೋ? ಎಲ್ಲಿಗೆ ಕಳಿಸಬೇಕು? ಯಾವ ಪ್ರಕಾರ ಅಪ್ಪಣೆಯಾಗುವದೋ ಆ ಪ್ರಕಾರ ವರ್ತಿಸುವೆನು." ಮಹಾರಾಜರ ಈ ಪ್ರಾರ್ಥನೆಯನ್ನು ಕೇಳಿ, ಶ್ರೀ ದತ್ತಾತ್ರೇಯನು ಅವರಿಗೆ ಪ್ರಸನ್ನನಾಗಿ ನುಡಿದನೇನಂದರೆ:—"ನಾನು ಗರುಡೇಶ್ವರದಲ್ಲಿ ವಾಸ ಮಾಡುವ ಅಪೇಕ್ಷೆಯುಳ್ಳವನಾಗಿದ್ದೇನೆ. ಅಲ್ಲಿ ಒಂದು ಸಣ್ಣ ದೇವಾಲಯವನ್ನು ಕಟ್ಟಿಸಿ, ಮೂರ್ತಿಯನ್ನು ಸ್ಥಾಪಿಸಬೇಕು. ಪೂಜಾ-ಪುನಸ್ಕಾರಾದಿಗಳ ಯೋಗ್ಯ ವ್ಯವಸ್ಥೆಯನ್ನು ಮಾಡಬೇಕು" ಇತ್ಯಾದಿ. ಶ್ರೀ ದತ್ತಗುರುವಿನ ಈ ಅಪ್ಪಣೆಯನ್ನು ಕೇಳಿ ಮಹಾರಾಜರು ಸಮಾಧಾನಪಟ್ಟು, ಈ ಸಂಗತಿಯನ್ನು ತಮ್ಮ ಭಕ್ತಮಂಡಲಿಗೆ ತಿಳಿಸಿದರು. ಮಹಾರಾಜರು ಹೇಳುವದೊಂದೇ ತಡ; ಹಾ, ಹಾ, ಅನ್ನುವಷ್ಟರಲ್ಲಿ ಗುಡಿಯ ಸಲುವಾಗಿ ವರ್ಗಣಿಯು ಕೂಡಿತು. ಬೇಗನೆ ದೇವಾಲಯವೂ ಸಿದ್ಧವಾಯಿತು. ಮಹಾರಾಜರು ಕಾಲವಿಲಂಬ ಮಾಡದೆ, ಆ ದೇವಾಲಯದಲ್ಲಿ ಶ್ರೀ ದತ್ತಮೂರ್ತಿಯನ್ನು ಸ್ಥಾಪಿಸಿದರು; ಮತ್ತು ದೇವಸ್ಥಾನದ ಸೇವಾ-ಸೂತ್ರಗಳು ಸರಿಯಾಗಿ ಸಾಗಬೇಕೆಂದು ಪಂಚರನ್ನು ನೇಮಿಸಿದರು. ಮಹಾರಾಜರ ಭಕ್ತಮಂಡಲಿಯಲ್ಲಿ ಶ್ರೀಮಂತರಾದವರು ಆ ದೇವಾಲಯಕ್ಕೆ ಹೊಲಗಳನ್ನು ಹಾಕಿಕೊಟ್ಟರು. ಈ ಮೇರೆಗೆ ಮಹಾರಾಜರು ಶ್ರೀ ದತ್ತಮೂರ್ತಿಯನ್ನು ಸ್ಥಾಪಿಸಿ, ಅದರ ಪೂಜಾವಿನಿಯೋಗಕ್ಕೆ ಯೋಗ್ಯ ಮಾರ್ಗವನ್ನು ಮಾಡಿಕೊಟ್ಟ ಬಳಿಕ ನಿಶ್ಚಿಂತರಾದರು. ಅವರ ಅತಿಸಾರವಂತೂ ಪ್ರಬಲವಾಗುತ್ತಲೇ ಇತ್ತು. ಅವರು ಅತಿಸಾರದಿಂದ ಬಹಳ ಕೃಶರಾದರು. ಜಗತ್ತಿನಲ್ಲಿ ಎಷ್ಟೋ ಜನರ ಮಹಾಮಹಾ ರೋಗಗಳನ್ನು ನಿವಾರಣ ಮಾಡಿದ ಈ ಮಹಾತ್ಮರು ಇಷ್ಟು ಕಷ್ಟವನ್ನು ಯಾಕೆ ಅನುಭವಿಸುತ್ತಿರಬಹುದೆಂಬದು ಜನರಿಗೆ ತಿಳಿಯದಾಯಿತು. ನಿಶ್ಚಿತ ಕಾಲವು ಸಮೀಪಿಸುವವರೆಗೆ ಮಹಾರಾಜರು ವ್ಯಾಧಿಯನ್ನು ಸಹನ ಮಾಡಿದರು.

ಶಾಲಿವಾಹನ ಶಕೆ ೧೮೩೬ನೇ ಆನಂದ ಸಂ॥ ದ ಜ್ಯೇಷ್ಠ ಮಾಸದ ಅಮಾವಾಸ್ಯೆಯ ಪುಣ್ಯ ದಿನವು ಬಂದಿತು. ಆ ದಿವಸ ಶ್ರೀ ಮಹಾರಾಜರು ನಿರಾಮಯರಾಗಿ ತೋರಿದರು ಅವರು ಆ ಇಡಿಯ ದಿವಸವನ್ನು ದರ್ಶನಕ್ಕೆ ಬಂದ ಎಲ್ಲ ಭಕ್ತಮಂಡಲಿಗೆ ಪ್ರಸಾದ ಕೊಡುವದರಲ್ಲಿಯೂ, ಫಲಮಂತ್ರಾಕ್ಷತೆಗಳನ್ನು ಕೊಡುವದರಲ್ಲಿಯೂ ಕಳೆದರು. ಮಹಾರಾಜರು ಹೀಗೆ ಫಲಮಂತ್ರಾಕ್ಷತೆಗಳನ್ನು ಯಾಕೆ ಕೊಡುವರೆಂಬದು ಜನರಿಗೆ ತಿಳಿಯದಾಯಿತು. ಸಂಜೆಯಾದ ಬಳಿಕ ಮಹಾರಾಜರು ಸಾಯಂಕಾಲದ ಅನುಷ್ಠಾನವನ್ನು ತೀರಿಸಿಕೊಂಡು, ಶ್ರೀ ದತ್ತಾತ್ರಯನ ದೇವಾಲಯದಲ್ಲಿ ದೇವರ ಮುಂಭಾಗದಲ್ಲಿ ಉತ್ತರಾಭಿಮುಖವಾಗಿ ಆಸನವನ್ನು ಹಾಕಿಕೊಂಡು ಕುಳಿತರು. ಆಗಿನ ಕಾಲದಲ್ಲಿ ಅವರ ದೈವೀ ತೇಜಸ್ಸನ್ನು ನೋಡಿ ಜನರು ಆಶ್ಚರ್ಯಭರಿತರಾದರು. ಆಗ ಮಹಾರಾಜರು ಪ್ರಾಣಾಯಾಮವನ್ನು ಮಾಡಿ ಮತ್ತೆ ಕಣ್ಣು ತೆರೆದು, ಹತ್ತರ ನಿಂತಿದ್ದ ಜನರನ್ನು ಕುರಿತು:—"ಪುಣ್ಯಶಾಲಿಗಳೇ, ನಾನು ಈ ಜಡದೇಹದಿಂದ ಮುಕ್ತನಾಗುವ ಸುಯೋಗವು ಈಗ ಬಂದಿರುತ್ತದೆ. ಎಲ್ಲರೂ ಈ ಕಾಲಕ್ಕೆ ಶ್ರೀ ದತ್ತಗುರುವಿನ ನಾಮೋಚ್ಚಾರವನ್ನು ಮಾಡತಕ್ಕದ್ದು" ಎಂದು ಪ್ರಣವೋಚ್ಚಾರ ಮಾಡಿ, ಪರಬ್ರಹ್ಮಸ್ವರೂಪದಲ್ಲಿ ಐಕ್ಯರಾದರು!!! ನೋಡನೋಡುವಷ್ಟರಲ್ಲಿ ಮಹಾರಾಜರ ಆತ್ಮವು ಹೊರಟು ಹೋಗಿ, ಜಡದೇಹವು ಉಳಿಯಲು, ನೆರೆದ ಜನಸಮೂಹಕ್ಕೆ ಬಹಳ ವಿಷಾದವೆನಿಸಿತು. ಲೋಕೋದ್ಧಾರಕ್ಕಾಗಿ ಅವತರಿಸಿದ ಒಂದು ಭಗವದ್ವಿಭೂತಿಯು ಗುಪ್ತವಾಯಿತೆಂದು ಎಲ್ಲರೂ ಅಂದರು. ಬಳಿಕ ಮಹಾರಾಜರ ಜಡದೇಹಕ್ಕೆ ಸರ್ವಾನುಮತದಿಂದ ನರ್ಮದೆಯ ಪವಿತ್ರೋದಕದಲ್ಲಿ ಜಲಸಮಾಧಿಯು ಮಾಡಲ್ಪಟ್ಟಿತು!



# ಉಪಸಂಹಾರ.

ಪ್ರಿಯವಾಚಕರೇ, ಇಲ್ಲಿಗೆ ನಮ್ಮ ಚರಿತ್ರನಾಯಕರಾದ ಶ್ರೀ ಟೇಂಬೇ ಮಹಾರಾಜರವರ ಸಂಕ್ಷಿಪ್ತ ಚರಿತ್ರವನ್ನು ಉಪಸಂಹರಿಸುವೆವು. ಈ ಮಹಾತ್ಮರ ದಿವ್ಯ ಚರಿತ್ರವನ್ನೋದಿ ವಾಚಕರು ಆನಂದಪಟ್ಟಿರಬಹುದು. ಇಂಥ ಸತ್ಪುರುಷರ ಅವತಾರಗಳು ಮೇಲಿಂದ ಮೇಲೆ ಆಗುತ್ತಿರುವದರಿಂದ, ನಮ್ಮ ಸನಾತನ ಧರ್ಮವು ಚಿರಜೀವಿಯಾಗಿರುವದೆಂದು ಹೇಳಲು ಸಂದೇಹವಿಲ್ಲ.

ಮನುಷ್ಯರಾದ ನಮ್ಮನ್ನು ಹಾದಿಗೆ ಹಚ್ಚಲು, ಮನುಷ್ಯರಾಗಿ ಹುಟ್ಟಿಬಂದ ಸತ್ಪುರುಷರೂ ಮಾನುಷವೃತ್ತಿಯಂತೆ ವ್ಯವಹಾರವನ್ನು ಮಾಡಬೇಕಾಗುವದು. ಪ್ರಸ್ತುತ ಚರಿತ್ರನಾಯಕರ ಉದಾಹರಣೆಯನ್ನೇ ತಕ್ಕೊಳ್ಳುವಾ. ಈ ಮಹಾತ್ಮರು ವಿರಕ್ತರಿದ್ದಾಗ್ಯೂ ಗೃಹಸ್ಥಾಶ್ರಮಿಗಳಿದ್ದಾಗ ಸಾಂಸಾರಿಕ ಧರ್ಮಕ್ಕನುಸರಿಸಿ, ತಂದೆ-ತಾಯಿಗಳ ಶುಶ್ರೂಷೆಯನ್ನು ಮಾಡಿದರು; ಅಣ್ಣ-ತಮ್ಮಂದಿರನ್ನು ಸಂರಕ್ಷಿಸಿದರು; ಬಂಧು-ಬಳಗದವರ ಮೇಲೆ ಪ್ರೇಮ ಮಾಡಿದರು; ಹೆಂಡತಿಯನ್ನು ಆದರದಿಂದ ಕಾಪಾಡಿದರು; ಸಂಸಾರದಲ್ಲಿ ಒದಗುವ ಸುಖ-ದುಃಖಗಳನ್ನು ಅನುಭವಿಸಿದರು. ಹೀಗೆ ಸಂಸಾರದ ಎಲ್ಲ ಉಪಾಧಿಗಳಿಗೆ ಒಳಗಾಗಿದ್ದರೂ ಅವರು ದೊಡ್ಡ ಸತ್ಪುರುಷರೆಂದೆನಿಸಿಕೊಂಡರು; ಪರೋಪಕಾರಿಗಳೆನಿಸಿಕೊಂಡರು. ಇಂಥ ಸತ್ಪುರುಷರ ಸಂಸಾರಧರ್ಮವನ್ನು ತಿಳಕೊಂಡು ಅದರಂತೆ ನಡಿಯಲುಪಕ್ರಮಿಸುವದೇ ಸತ್ಪುರುಷರ ಚರಿತ್ರದ ವಾಚನದಿಂದಾಗುವ ಮಹತ್ಫಲವೆಂದು ಊಹಿಸಲಾಗುವದು. ಸತ್ಪುರುಷರಲ್ಲಿದ್ದ ಧರ್ಮವನ್ನು ತಿಳಕೊಂಡು ಆಚರಣೆಯಲ್ಲಿ ತರದಿದ್ದರೆ, ಸತ್ಪುರುಷರ ಚರಿತ್ರದ ರಹಸ್ಯವೇ ನಮಗೆ ತಿಳಿಯಲಿಲ್ಲವೆಂದು ಅನ್ನಬೇಕಾಗುತ್ತದೆ. ಕಥಾ-ಕಾದಂಬರಿಗಳಂತೆ ಮನೋರಂಜನವಾದ ಸಾಧನಗಳು ಸತ್ಪುರುಷರ ಚರಿತ್ರೆಯಲ್ಲಿ ಇರದೆ, ಕೇವಲ ಗುಣಗಳ ಪೋಷಣಕ್ಕೆ ಬೇಕಾಗುವ ಪ್ರಸಂಗಗಳೇ ಇರುವದರಿಂದ, ವೃತ್ತಿಯ ಸುಧಾರಣೆಗಾಗಿಯೇ ಇಂಥ ಚರಿತ್ರಗಳ

ಅವಶ್ಯಕತೆಯು ಇರುವದೆಂದು ಹೇಳಬಹುದು. ಸತ್ಪುರುಷರ ಚರಿತ್ರಗಳನ್ನೋದಲಿಚ್ಛಿಸುವವರು ವೃತ್ತಿಯ ಸುಧಾರಣೆಯ ದೃಷ್ಟಿಯಿಂದ ಓದಬೇಕೆಂದು ಬೇರೆ ಬರೆಯಲವಶ್ಯವಿಲ್ಲ.

ಶ್ರೀ ಟೇಂಬೇ ಮಹಾರಾಜರಂಥ ಮಹಾತ್ಮರ ಸಂಸಾರಕ್ಕೂ, ಕ್ಷುದ್ರರಾದ ನಮ್ಮಂಥವರ ಸಂಸಾರಕ್ಕೂ ಎಷ್ಟು ಅಂತರವಿರುತ್ತದೆಂಬದನ್ನು ಮರ್ಮಜ್ಞರು ಕಂಡು ಹಿಡಿಯದೆ ಇರಲಾರರು. ಶ್ರೀ ಮಹಾರಾಜರವರು ಚತುರ್ಥಾಶ್ರಮದಲ್ಲಿ ಮಾಡಿದ ಲೋಕಹಿತಕ್ಕಿಂತ, ಗೃಹಸ್ಥಾಶ್ರಮದಲ್ಲಿ ಮಾಡಿದ ಲೋಕಹಿತವು ಮಹತ್ವದ್ದೆಂದು ಹೇಳಲಾಗುವದು. ಯಾಕಂದರೆ, ಯಾವ ಉಪಾಧಿಯೂ ಇಲ್ಲದೆ ಸಂನ್ಯಾಸಾಶ್ರಮದಲ್ಲಿ ಮಾಡಿದ ಲೋಕಹಿತದ ಕೆಲಸಕ್ಕಿಂತ, ಉಪಾಧಿಯೊಳಗೆ ಮುಳುಗಿ ಏಳುವ ಗೃಹಸ್ಥಾಶ್ರಮದಲ್ಲಿ ಮಾಡಿದ ಲೋಕಹಿತವು ಶ್ರೇಷ್ಠವಾದದ್ದೆಂದು ಯಾರು ಅನ್ನಲಿಕ್ಕಿಲ್ಲ? ಸಾಂಸಾರಿಕರಾದ ನಮಗಂತೂ ಅವರ ಗೃಹಸ್ಥಾಶ್ರಮದ ಆಚರಣೆಯೇ ಮಹತ್ವದ್ದಾಗಿ ತೋರಲಿಕ್ಕೆ ಬೇಕು.

ಶರಣು ಬಂದ ಅನೇಕ ಜನರ ಇಷ್ಟಾರ್ಥಗಳನ್ನು ಪೂರ್ಣಪಡಿಸಿದ ಈ ಮಹಾತ್ಮರು ತಮಗೊಮ್ಮೆ ಜಡ್ಡು ಆದಾಗ ಕುಡಿಯಲಿಕ್ಕೆ ಮಜ್ಜಿಗೆ ಸಹ ಸಿಗದೆ ಪೇಚಾಡಿದರು! ಆಗ ಅವರು ತಮ್ಮ ಸಿದ್ಧಿಯ ಉಪಯೋಗವನ್ನು ಮಾಡಿಕೊಂಡಿದ್ದರೆ, ಇಷ್ಟು ಪೇಚಾಟಕ್ಕೆ ಕಾರಣವಿರಲಿಲ್ಲೆಂದು ಕೆಲವರು ಆಕ್ಷೇಪಿಸಬಹುದು; ಆದರೆ ಜ್ಞಾನಿಗಳಾದ ಆ ಮಹಾತ್ಮರು, ಕರ್ಮಭೋಗವನ್ನು ಯಾಕೆ ತಪ್ಪಿಸಿಕೊಂಡಾರು? ಅವರು ತಮ್ಮ ಕರ್ಮಭೋಗಕ್ಕೆ ತಪೋಬಲದಿಂದ ಪ್ರತೀಕಾರವನ್ನುಂಟು ಮಾಡಿಕೊಂಡಿದ್ದರೆ, ಅವರೂ ಸ್ವಾರ್ಥಿಗಳ ಪಙ್ತಿಯಲ್ಲೇ ನಿಲ್ಲಬೇಕಾಗುತ್ತಿತ್ತು. ಇದರಂತೆ ಜಗತ್ತಿನಲ್ಲಿ ಹಿಂದೆ ಆಗಿ ಹೋದ ಮಹಾತ್ಮರೆಲ್ಲರೂ ಕರ್ಮವನ್ನು ಭೋಗಿಸಿಯೇ ತೀರಿರುತ್ತಾರೆ. ಇಂಥ ಮಹಾತ್ಮರ ಸಚ್ಚರಿತ್ರ ಶ್ರವಣದಿಂದ ನಮ್ಮಲ್ಲಿ ಅಂಶರೂಪದಿಂದಾದರೂ ಸದ್ಗುಣಗಳು ಸೇರಿಕೊಳ್ಳಲೆಂದು ಶ್ರೀ ಶೇಷಾಚಲ ಸದ್ಗುರುವನ್ನು ಪ್ರಾರ್ಥಿಸುವೆವು.



ಶ್ರೀ ಗುರು

# ವಾಸುದೇವಾನಂದ ಸರಸ್ವತೀ

# (ಟೇಂಬೆ)

## ಸ್ವಾಮಿಗಳ ಚರಿತ್ರರೂಪೀ ಪದ್ಯಕಾವ್ಯವು.

---


ಬರೆಯಿಸಿದವರು: - ಹಾವನೂರ ಭಕ್ತರು.

ಬರೆದವನು:—ಓರ್ವ ಕನ್ನಡಿಗ.

(ಮು. ರಾ. ಶಿವಪೂಜಿ, ಮಾಲತೀಶಾರ್ಚಕ ದೇವಗಿರಿ.)


---

ಅಭಂಗ (ಸಂತಮಹಿಮಾ)

ಸದಾ ಸಂತಾಪಾಶೀ ಜಾವೆ|| ತ್ಯಾಚೆ ಜವಳೀ ಬೈಸಾವೆ || ೧ ||
ಉಪದೇಶ ತೇ ನ ದೇತಿ|| ತರೀ ಐಕಾವ್ಯಾ ತ್ಯಾ ಗೋಷ್ಟೀ|| ೨ ||
ತೇಚಿ ಉಪದೇಶ ಹೋತೀ|| ತ್ಯಾಹಿ ಕಷ್ಟನಷ್ಟ ಹೋತೀ || ೩ ||
ವಾಸುದೇವ ಮ್ಹಣೆ ಸಂತ|| ಸಂಗೆ ಕರೀ ತೀ ಪಸಂತ || ೪ ||

---


ಪ್ರಕಾಶಕ:—

ಭಿ. ಪ. ಕಾಳೆ,

ವ್ಯಾ. ಶ್ರೀ ಶೇಷಾಚಲ ಗ್ರಂಥಮಾಲೆ, ಆನಂದವನ.

---

ಬೆಲೆ ೪ ಆಣೆ

||ಶ್ರೀ ಗುರು ವಾಸುದೇವಾನಂದ ಸರಸ್ವತೀ ಪ್ರಸನ್ನ||

# ಲೇಖಕನ ಹೃದ್ಗತ.

ಶ್ರೀಮತ್ ಪರಮಹಂಸ ಪರಿವ್ರಾಜಕಾಚಾರ್ಯ ವಾಸುದೇವಾನಂದ ಸರಸ್ವತೀ ಸ್ವಾಮಿಯವರ ಚರಿತ್ರ ಬರೆಯಲಿಕ್ಕೆ ಸಹಸ್ರಮುಖದ ಆದಿಶೇಷ ನಿಂದಲೂ ಅಸಾಧ್ಯವು. ಯಾಕಂದರೆ, ಶ್ರೀ ಗುರುದತ್ತಮೂರ್ತಿಯ ಅವತಾರವೇ ಆಗಿದ್ದ ಇಂಥ ಮಹನೀಯರು ಎಷ್ಟೋ ಲೀಲೆಗಳನ್ನು ಪ್ರಕಟಿಸಿರಬಹುದು! ಎಷ್ಟೋ ತರದ ವಿಪತ್ತಿನಿಂದ ಸದ್ಭಕ್ತರನ್ನು ಉದ್ಧಾರ ಮಾಡಿರಬಹುದು!! ಎಷ್ಟೋ ಕಡೆಗೆ ಅಡ್ಡಾಡಿ ಕ್ಷೇತ್ರ-ತೀರ್ಥಗಳನ್ನು ಪಾವನ ಮಾಡಿರಬಹುದು! ಇವೆಲ್ಲ ಕಾರ್ಯಗಳ ಸಮ್ಮೇಲನವೇ ಅವರ ದಿವ್ಯಚರಿತ್ರವಾಗುವದು; ಮತ್ತು ಅವರು ಎಷ್ಟೋ ಅನುಭವಿಕ ಹಿತೋಕ್ತಿಗಳನ್ನು ಆದರ್ಶಭೂತವಾಗಿ ಬರೆದಿಟ್ಟಿರಬಹುದು!!! ಹೀಗಿದ್ದದರಿಂದ ಸಾಗರದಂತೆ ಅಪಾರವಾದ ಇಂಥ ವಿಷಯವನ್ನು ನನ್ನಂಥ ಕ್ಷುದ್ರ ಪ್ರಾಣಿಯು ಬರೆಯತೊಡಗುವದೆಂದರೆ, ವಿಚಿತ್ರವೇ ಸರಿ! ಆದರೂ ಆ ಸದ್ಗುರುನಾಥನ ಪ್ರೇರಣೆಯ ಮೂಲಕ (ಎಂಥ ಅಜ್ಞಾನಿಯೇ ಆಗಿರಲಿ, ಅಂಥವನಿಂದಲೇ ಸೇವೆ ತೆಗೆದುಕೊಳ್ಳಬೇಕೆಂದು ಪ್ರೇಮವಿದ್ದ ಕಾರಣ) ಆತನೇ ಹೃದಯದಲ್ಲಿದ್ದು ನುಡಿಸಿದಂತೆ ಒಂದೆರಡು ತೊದಲ್ನುಡಿಗಳಿಂದ ತಪ್ಪೊಪ್ಪುಗಳಿದ್ದ ಈ ಚರಿತ್ರವನ್ನು ಬರೆದು ಆತನ ಮುಂದೆ ಇಟ್ಟಿದ್ದೇನೆ. ಇದಕ್ಕೆ ಆತನೇ ಹೊಣೆಗಾರನಾದ್ದರಿಂದ, ಅನನ್ಯಭಾವದಿಂದ ಈ ದಿವ್ಯಲೇಖವನ್ನು ಸದ್ಗುರು ಚರಣಾರವಿಂದದಲ್ಲಿ ತ್ರಿಕರ್ಣಪೂರ್ವಕವಾಗಿ ಅರ್ಪಿಸುವದೇ ನನ್ನ ಮುಖ್ಯ ಕೆಲಸವು.

"ಈ ಚರಿತ್ರವನ್ನು ಶ್ರದ್ಧಾಪೂರ್ವಕವಾಗಿ ಯಾರು ಓದಿ-ಕೇಳುವರೋ, ಅಂಥ ಭಕ್ತವರ್ಗಕ್ಕೆ ಶ್ರೀ ದತ್ತ ಮೂರ್ತಿಯ ಅನುಗ್ರಹವಾಗುವದು. ಅವರು ಅನಾಯಾಸವಾಗಿ ಸಂಸಾರದಲ್ಲಿಯ ಸಕಲ ತಂದ ಸುಖ-ಸಂಪತ್ತನ್ನು ಅನುಭೋಗಿಸಿ ಕಡೆಗೆ ಸದ್ಗತಿಯನ್ನು ಪಡೆಯುವರೆ''ಂದು ಶ್ರೀ ಗುರು ವಾಸುದೇವಾನಂದಸರಸ್ವತೀ ಸ್ವಾಮಿಗಳ ಪರಮಶಿಷ್ಯ-ಗುರುಭಕ್ತಶಿಖಾಮಣಿಯಾದ- 'ಗಾಂಡಾಬುವಾ' ಎಂಬವರ ಅಪ್ಪಣೆಯಾಗಿದೆ.

# ಶ್ರೀ ಗುರುಭಕ್ತರಡಿದಾವರೆಯಲ್ಲಿ ವಿನಂತಿ.



ಅಯ್ಯಾ, ಸದ್ಗುರುಸೇವೆಯಲ್ಲಿ ದುರಂಧರರಾದ ಮಹನೀಯರೇ, ಶ್ರೀ ಗುರು ವಾಸುದೇವಾನಂದ ಸರಸ್ವತಿಗಳ ಆರಾಧನೆಯನ್ನು ಈಗ ಹದಿನಾಲ್ಕು-ಹದಿನೈದು ವರುಷಗಳಿಂದಲೂ(ನಿಮ್ಮ)ಹಾವನೂರಲ್ಲಿ ಮಾಡುತ್ತ ಬಂದದ್ದು ಕೇಳಿದ್ದೆನು. ಅದರ ಮುಖಾಂತರ ಪ್ರಸಾದವನ್ನಾದರೂ (ನಿಮ್ಮಿಂದ) ಪ್ರತಿವರ್ಷಕ್ಕೂ ಹೊಂದುತಲಿದ್ದೆನು.

ಬರಬರುತ್ತ ಆ ಸದ್ಗುರುವು (ಪ್ರಸಾದದ ಬಲುಮೆಯ ಯೋಗದಿಂದ) ಈ ವರ್ಷ ಅಂದರೆ ೧೮೫೩ನೇ ಪ್ರಜೋತ್ಪತ್ತಿ ಸಂ|ದ ಅಧಿಕ ಆಷಾಢ ವದ್ಯ ೧೪-೩೦, ಹಾಗು ನಿಜ ಆಷಾಢ ಶುದ್ಧ ೧ ಕ್ಕೆ ಸನ್ನನ್ನೇ ಅಲ್ಲಿಯ ವರೆಗೆ ಬರುವಂತೆ ಅನುಗ್ರಹ ಮಾಡಿದನು. ಅಲ್ಲಿ ಆಗ್ಗೆ ನಡೆದ ಸೇವಾ-ಸೂತ್ರಗಳನ್ನು ಕಣ್ಣಾರೆ ಕಂಡು ನಾನು ಪರಮ ಧನ್ಯನಾದೆನು! ಆ ಸದ್ಗುರುವು ಮಾಡಿದ ಇದಕ್ಕೂ ಹೆಚ್ಚಿನ ಲೀಲೆಯೊಂದನ್ನು ಇಲ್ಲಿ ಹೇಳದಿರಲಾರೆನು. ಈ ವರೆಗೂ ಆ ಸದ್ಗುರು ಚರಿತ್ರವನ್ನು ಪುರಾಣ ರೂಪದಲ್ಲಿ ಹೇಳುವದಕ್ಕೆ ಮರಾಠೀಭಾಷೆಯಲ್ಲಿದ್ದ ಶ್ರೀ ಗಾಂಡಾಬುವಾ ವಿರಚಿತವಾದ ಪುಸ್ತಕವನ್ನೇ ಉಪಯೋಗಿಸಿಕೊಳ್ಳುತ್ತಿದ್ದರು; ಈಗ ಅದೇ ಗ್ರಂಥಾಧಾರದ ಮೇಲಿಂದ ಎರಡೇ ದಿನಗಳಲ್ಲಿ ಆ ಸದ್ಗುರುವು ಪ್ರೇರಿಸಿದಂತೆ ಕನ್ನಡ ಭಾಮಿನಿಷಟ್ಪದಿ ಕಾವ್ಯರೂಪ ಚರಿತ್ರವು ರಚಿತವಾಯಿತು; ಮತ್ತು ಇದನ್ನು ಅಲ್ಲಿಯ ಭಕ್ತವೃಂದದೆದುರಿಗೆ ಆತನೊಲಿಯುವದಕ್ಕೋಸ್ಕರ ಪಠಿಸಿ ಒಪ್ಪಿಸುವದೂ ಆಯಿತು. ಇದೇನು ಸಾಧಾರಣವಾದ ಲೀಲೆಯೆ? ಅಂದಿನಂಥ ಸುಯೋಗವು ನನಗೆ ಈ ವರೆಗೂ ಲಭಿಸಿದ್ದಿಲ್ಲ. ಧನ್ಯ! ನಾನೇ ಧನ್ಯನು!!

ಭಾ. ಷಟ್ಪದಿ—ಅಧಿಕತರದಾಷಾಢಮಾಸದೆ |
ಒದಗಿದಂಥಾ ಕಡೆಯ ತಿಥಿಯೊಳು|
ಸದಯರಾಗಿಹ ಭಕ್ತನಿಕರದಿ ಪೂಜೆಯಂಗೊಂಡು||
ಮುದದಿ ಮರುದಿನ ನಿಜದಿ ಪಾಡ್ಯದೆ|
ಹೃದಯವಾಸನು ವಾಸುದೇವನು |
ಪದುಳಪೆಜ್ಜ್ಯವ ತೆರದೆ ಚರಿತವ ತಾನೆ ಬರೆಯಿಸಿದ ||೧||
ಅಂದೆಯಲ್ಲವೆ? ದೇವಗಂಗೆಯು |
ಬಂದು ಜಲದೊಳು ಸಕಲ ಜೀವಿಯ|
ಮಿಂದ ಮಾತ್ರಕೆ ಪರಮಪಾವನರನ್ನೆ ಮಾಡಿದ್ದೂ ||
ಚಂದ್ರಮಂದಾಕಿನಿಯರೀರ್ವರು|
ತಂದೆ ತ್ರಿಪುರಾಂತಕನ ತಲೆಯೊಳು|
ಹೊಂದಿಕಿಂದಲೆ ಶೋಭೆಗೊಂಡುದ ನೋಡಿ ನಲಿದದ್ದೂ ||೨||
ಹೃದಯವಾಸನ ಪ್ರೀತಿಯಿಂದಲಿ|
ಮೊದಲಿನಿಂದಲು ಕಾಣದಿದ್ದವ |
ಒದಗಿದಂಥಾದೇವನಕ್ಕರ ತಿಳಿದುಕೊಳ್ಳುವನೇ? ||
ಇದಕೆ ತಾಯಿಯು ಮಕ್ಕಳನ್ನುರೆ|
ಪದುಳದಿಂ ಪರಿಪಾಲಿಸಿಪ್ಪುದ|
ಅಧಮ ತಿಳಿವನೆ ತನ್ನ ಸೊಕ್ಕಿನ ನಡತೆಗನುಸರಿಸೀ ||೩||
ದೇವಸೇವೆಯ ಮಾಡಲಿಕ್ಕದು|
ಭಾವ ಶುದ್ಧಿಯು ಮೊದಲು ಬೇಕೈ|
ಹೇವದಿಂದಲೆ ಯೆಸಗಲಭವನು ಒಲಿದು ಬಂದಪನೇ?||
ನಾವು ಮಾಡುವ ಸೊಕ್ಕಿನುದ್ಯಮ |
ಬೇವು ಬೆಲ್ಲದೊಳಿಟ್ಟಪರಿಯ್ಯೆ |
ಜೀವಕೆಂತಕ್ಕರತೆ ಪಡುವೆವೊ ಹಾಗೆ ನಡೆಯುವದು ||೪||

ಆದ್ದರಿಂದ ನಾವೆಲ್ಲರೂ ಆದಷ್ಟು ಪ್ರಯತ್ನ ಮಾಡಿ ಸಂತಸೇವೆಯನ್ನೂ ಆ ಮುಖಾಂತರ ಭಗವದಾರಾಧನೆಯನ್ನೂ ಮಾಡಿ, ಕೃತಾರ್ಥರಾಗಬೇಕಾ

ಯಿತು. ಅದಕ್ಕಂತೇ ಶ್ರೀ ಗುರುನಾಥನು ಈ ಬಾಲಕನ ಮೇಲೆ ಕೃಪೆ ಮಾಡಿ ಸಂತದರ್ಶನ ಮಾಡಿಸಿರಬಹುದು!! ಆಗಲಿ. ಒಳ್ಳೇ ಕಾರ್ಯವು ಪ್ರಾರಂಭವಾಯಿತು. ಇನ್ನು ಮೇಲೆ ಮನುಷ್ಯಗಣನೆಯಲ್ಲಿ ಸೇರಿದೆನು. ಈಗ ಧನ್ಯನಾದೆನು. ಈ ವರೆಗೆ ಓದು-ಬರೆಯಲಿಕ್ಕೆ ನೀನು ಕಲಿಸಿದ್ದು ಸಾರ್ಥಕವಾಯಿತು! ಹೇ ದೇವಾ, ಸದ್ಗುರುನಾಥಾ, ನಿನ್ನ ಸೇವೆಯನ್ನು ತಪ್ಪದಂತೆ ಈ ದೇಹಕ್ಕೆ ಒದಗಿಸು. ಇಷ್ಟೇ ನನ್ನ ಬಯಕೆ!!

ಜಯ ಗುರುದೇವ ಸಮರ್ಥ!

ಈ ತರದ ಕನ್ನಡ ಪದ್ಯಾತ್ಮಕವಾದ ಶ್ರೀ ಟೇಂಬೆ ಗುರುಗಳ ಈ ಚರಿತ್ರವನ್ನು ಛಾಪಿಸಿ ಪ್ರತಿ ವರುಷಕ್ಕೂ ಪುರಾಣದ ಕಾಲಕ್ಕೆ ಉಪಯೋಗಿಸಿಕೊಳ್ಳಬೇಕೆಂದು ಬಹು ಮತದಿಂದ ನಿಶ್ಚಯಿಸಿ, ಹಾವನೂರ ಸದ್ಭಕ್ತಮಂಡಳಿಯವರು ನನಗೆ ಹತ್ತು ರೂಪಾಯಿಗಳನ್ನು ಕೊಟ್ಟದ್ದಾಯಿತು; ಮತ್ತು ಅದಕ್ಕಾಗಿ ನಾನು ಈ ಗ್ರಂಥವನ್ನು ಆನಂದವನದ ಶ್ರೀ ಶೇಷಾಚಲ ಪ್ರಿ. ಪ್ರೆಸ್ಸಿನ ಮಾಲಕರಾದ ಮಿ| ಭಿ. ಪ. ಕಾಳೆಯವರಿಗೆ ಇದರ ಸರ್ವಾಧಿಕಾರಗಳೊಡನೆ ಒಪ್ಪಿಸಿದ್ದೂ ಆಯಿತು. ಸದರ ಮಿ| ಕಾಳೆ ಇವರು ಇದನ್ನು ಅಚ್ಚುಕಟ್ಟಾಗಿ ಮುದ್ರಿಸಿ, ಪ್ರಸಿದ್ಧಪಡಿಸಿರುವರು. ಈ ರೀತಿಯಾಗಿ ಸದ್ಗುರುವು ತನ್ನ ಕಾರ್ಯವನ್ನು ತಾನೇ ಪೂರೈಸಿಕೊಂಡಿರುವನು. ಇಂಥ ಸದ್ಗುರು ಅನುಗ್ರಹಕ್ಕೆ ಪಾತ್ರವಾದ ಈ ಚರಿತ್ರವನ್ನು ಕನ್ನಡ ರಸಿಕ ಭಕ್ತರು ಓದಿ, ಕೇಳಿ, ಆನಂದಪಡುವದರಿಂದ ಜನ್ಮಸಾರ್ಥಕತೆಯಾಗುವದಲ್ಲದೆ, ಇದನ್ನು ಸಂಗ್ರಹಿಸಿದರೆ, ಇಹ-ಪರ ಸೌಖ್ಯಗಳು ಲಭಿಸುವವೆಂದು ದೃಢನಿಶ್ಚಯದಿಂದ ಹೇಳುವೆನು.

ತಮ್ಮೆಲ್ಲರ ಪಾದಸೇವಕ ಹಾಗು

ಶ್ರೀ ಮಾಲತೀಶಾರ್ಚಕ,

ಮು. ರಾ. ಶಿವಪೂಜಿ,
ಶ್ರೀ ಮಾಲತೀಶ ಮಂದಿರ ಸಂಸ್ಥಾ
ದೇವಗಿರಿ

೧೮೫೩ನೇ ಪ್ರಜೋತ್ಪತ್ತಿ
ಸಂ||ದ ನಿಜ ಆಷಾಢ ಶು| ೧
ಗುರುವಾರ



# ಪ್ರಸ್ತಾವನೆ.

ಭರತಖಂಡವು ಭಕ್ತಿಗೆ ಜನ್ಮಭೂಮಿ. ಲೀಲಾಕ್ಷೇತ್ರ. ಈ ಪುಣ್ಯಭೂಮಿಯಲ್ಲಿ ಅನೇಕ ಮಂದಿ ಭಗವದ್ಭಕ್ತರು ಭಗವಂತನ ಸಂಕಲ್ಪಾನುಸಾರ ಆಗಾಗ್ಗೆ ಅವತರಿಸಿ, ಸುಜೀವಿಗಳಿಗೆ ಜ್ಞಾನೋಪದೇಶವನ್ನು ಮಾಡುತ್ತ ಬಂದಿರುವರೆಂಬ ವಿಷಯವು ನಮ್ಮ ವಾಚಕರಿಗೇನು ಹೊಸದಲ್ಲ. ಅವರು ಇಂದಿನ ವರೆಗೆ ಎಷ್ಟೋ ಜನ ಸತ್ಪುರುಷರ ಕಥಾನಕಗಳನ್ನು ಓದಿ ಮನನ ಮಾಡಿರುವರು. ಎಷ್ಟಾದರೇನು? ಮಹಾತ್ಮರ ಮಾಹಾತ್ಮ್ಯಗಳನ್ನು ಕೇಳುವದರಲ್ಲಿ ಅವರ ಕಿವಿಗಳಿಗೆ ದಣಿವೆಂಬುದೇ ಇಲ್ಲ. ಇಂತಹ ಪಾಠಕವೃಂದದ ಸಲುವಾಗಿಯೇ ಇಂದು ಕನ್ನಡಿಗರಿಗೆ ಚಿರಪರಿಚಿತರಾದ ನಮ್ಮ ಮಿತ್ರಶ್ರೇಷ್ಠ ಶಿವಪೂಜೆಯುವರು ಈ ವಿಭೂತಿಗಳ ಚರಿತ್ರವನ್ನು ತಿಳಿಗನ್ನಡ ಪದ್ಯದಲ್ಲಿ ಒರೆದು ಅರ್ಪಿಸಿರುವರು.

'ಶಿಶುರ್ವೇತ್ತಿ ಪಶುರ್ವೇತ್ತಿ ವೇತ್ತಿಗಾನ ರಸಂ ಫಣಿ!'

ಎಂಬಂತೆ ಪದ್ಯವು ಮೊದಲೇ ಮೋಹಕ. ಮೇಲಾಗಿ ಸತ್ಪುರುಷರ ಗುಣಾನುವಾದ. ಸಾಲದುದಕ್ಕೆ ಅದರಲ್ಲಿಯೂ ತೀರ ಇತ್ತೀಚಿನ ಸಂತಚರಿತ್ರ. ಅಂದಮೇಲೆ ಕೇಳುವದೇನು? "ಕಲಿಕಾಲವು ಹೆಚ್ಚಿತು. ಸಾಧುಗಳೆಲ್ಲಿ? ಸತ್ಪುರುಷರೆಲ್ಲಿ? ಎಲ್ಲವೂ ಸುಳ್ಳು!' ಎಂದು ತಿರಸ್ಕರಿಸುತ್ತಿರುವ ಜನರ ಕಣ್ಣಿಗೆ ಅಂಜನ ಹಾಕಿದಂತಾಗಿರುವದು. ಇರಲಿ.

ಶ್ರೀ ಟೇಂಬೆ ಮಹಾರಾಜರು ದೊಡ್ಡ ವಿಭೂತಿವರ್ಗಕ್ಕೆ ಸೇರಿದವರು. ಇವರ ಚರಿತ್ರವನ್ನು ಇವರ ಶಿಷ್ಯರೇ ಬೇರೆ ಬೇರೆಯಾಗಿ ಮೂರು ಪುಸ್ತಕಗಳ ರೂಪದಿಂದ ಪ್ರಕಟಿಸಿರುವರು. ಅವುಗಳ ಆಧಾರದ ಮೇಲಿಂದಲೇ ಕೈ. ವಾಸಿ ಕರ್ಪೂರ ಎಂಬವರು ಹಿಂದಕ್ಕೊಮ್ಮೆ ಗದ್ಯರೂಪದಿಂದ ಇವರ ಚರಿತ್ರವನ್ನು ಸದ್ಬೋಧ ಚಂದ್ರಿಕೆಯಲ್ಲಿ ಪ್ರಸಿದ್ಧಿಸಿ

ದ್ದರು. ಅದನ್ನೇ ಈಗ ಪುನಃ ಮಿ| ಶಿವಪೂಜಿಯುವರು ಪದ್ಯರೂಪದಲ್ಲಿ ಬಣ್ಣ ಕೊಟ್ಟು ರಂಗು ಮಾಡಿರುವರು. ಮುಖ್ಯವಾಗಿ ಸಾಧುಸಂತರಲ್ಲಿರುವ ಅತುಲ ವೈರಾಗ್ಯ, ಅಲೌಕಿಕ ತಪಃಸಾಮರ್ಥ್ಯ, ಈಶನಿಷ್ಠೆ, ಭೂತದಯೆ ಮುಂತಾದ ಗುಣಸಮುಚ್ಚಯಗಳನ್ನು ಇವರ ಜೀವನ ಚರಿತ್ರದಲ್ಲಿ ಬೇಕಾದಷ್ಟು ಕಂಡುಕೊಳ್ಳಬಹುದು. ಕನ್ನಡ ವಾಚಕ-ವಾಚಕಿಯರು ಇಂಥ ಮಹನೀಯರ ಚರಿತಾಮೃತವನ್ನು ಪಾನ ಮಾಡಿ ಈಶನಿಷ್ಠೆಯುಳ್ಳವರಾಗಲಿ, ತೇಜೋವಂತರಾಗಲಿ, ಭಾರತಭೂಮಿಯ ಭಾಗ್ಯೋದಯಕ್ಕೆ ಕಾರಣರಾಗಲಿ ಎಂಬುದೇ ನಮ್ಮ ಆಶೆ.

ಇಲ್ಲಿ ವಾಚಕವರ್ಗಕ್ಕೆ ಇನ್ನೊಂದು ಮಾತು ಹೇಳುವದುಳಿಯಿತು. ಈ ಪದ್ಯಗ್ರಂಥವನ್ನು ಬರೆದ ಮಿ|| ಶಿವಪೂಜಿಯುವರು ಇದನ್ನು ತಿದ್ದಿಕೊಡಬೇಕೆಂದು ನನಗೆ ಕೇಳಿಕೊಂಡರು. ಇಷ್ಟರಲ್ಲಿ ನನ್ನ ಮಿತ್ರ ನಾರಾಯಣಪುರ ಮಾಸ್ತರರು ಇದರಲ್ಲಿ ಅನೇಕ ತಿದ್ದುಪಡಿಗಳನ್ನು ಮಾಡಿದ್ದರು. ನಾನೂ ಯಥಾಮತಿ ತಿದ್ದುಕೊಡುವೆನೆಂದು ಒಪ್ಪಿಕೊಂಡು ಬಿಟ್ಟೆನು. ಮುಂದೆ ಕವಿತೆಗಳನ್ನು ಓದುತ್ತ ಹೋದ ಹಾಗೆ ಒಂದೆರಡು ದಿವಸದಲ್ಲಿಯೇ ನನಗೆ ಹೀಗೆನಿಸಿತು:—

"ಪೂರ್ವದಲ್ಲಿ ಒಬ್ಬ ಬ್ರಾಹ್ಮಣನು ಅತ್ಯುತ್ಕಟ ಭಕ್ತಿಯಿಂದ ಶ್ರೀ ವಿಷ್ಣುಸಹಸ್ರನಾಮದ ಪಾರಾಯಣ ಮಾಡುತ್ತಿರುವಾಗ "ವತ್ಸರೋ ವತ್ಸಲೋ ವತ್ಸಿ" ಎಂಬುದಕ್ಕೆ ಬದಲಾಗಿ "ಹುಚ್ಚಳೋ ಹುಚ್ಚಿಯೋ ಹುಚ್ಚಿ" ಎಂಬದಾಗಿ ಪಾಠ ಮಾಡಿದ್ದನಂತೆ. ಅದನ್ನು ಕೇಳಿದ ಮತ್ತೊಬ್ಬನು:— ಛೀ! ಹುಚ್ಚು ಬ್ರಾಹ್ಮಣ, ಹೀಗನ್ನಬಾರದು; ಶುದ್ಧಪಾಠವು ಹೀಗಿರುವದು, ಎಂದು ಹೇಳಿಕೊಟ್ಟನಂತೆ. ಪಾರಾಯಣ ಮಾಡುವ ಬ್ರಾಹ್ಮಣನಿಗೆ ಹಿಂದಿನ ಮನೆಯ ಕೋರಾನ್ನವೂ ಹೋಯಿತು; ಮುಂದಿನ ಮನೆಯ ಭಿಕ್ಷೆಯೂ ಹೋಯಿತು, ಎಂಬಂತೆ, ಪಾಠದಲ್ಲಿ ಗಲಭೆಯುಂಟಾಗಿ ಎರಡೂ ಮರೆತು ಹೋದವು. ಪಾರಾಯಣವನ್ನು ಬಿಟ್ಟಾದರೋ ಊಟವನ್ನೇ ಮಾಡುವಂತಿಲ್ಲ. ಉಪವಾಸ ಕುಳಿತುಬಿಟ್ಟನು. ಆಗ ಭಗವಂತನು:— "ತಪ್ಪಾಗಲಿ-ಒಪ್ಪಾಗಲಿ ತನ್ನ ಭಕ್ತನು ಏಕನಿಷ್ಠೆಯಿಂದ

ಮಾಡುತ್ತಿದ್ದ ಪಾರಾಯಣವನ್ನು ಈತನು ಕೆಡಿಸಿಬಿಟ್ಟನಲ್ಲ! ಎಂದು ಆತನ ನಾಲಿಗೆಯನ್ನು ಶೀಳಿದನಂತೆ!''

ಈ ಆಖ್ಯಾಯಿಕೆಯು ಮಾತು ಹೇಗೇ ಇರಲಿ, ಅತ್ಯಂತ ಭಕ್ತ್ಯೋದ್ರೇಕದಿಂದ ಗುರು ಚರಿತವನ್ನು ವರ್ಣಿಸಿದ * ಮಿ| ಶಿವಪೂಜೆಯವರ ಆಂತರಿಕ ಭಕ್ತಿಭಾವವನ್ನರಿಯದೆ, ಅದನ್ನು ತಿದ್ದ ಹೋದೆನಲ್ಲಾ! ಎಂಬುದೇ ನನಗುಂಟಾದ ಭೀತಿ. ತಿದ್ದುವದನ್ನು ಬಿಟ್ಟೇನೇ, ಒಪ್ಪಿಕೊಂಡ ಮಾತಿಗೆ ತಪ್ಪಿದಂತಾಗುವದಿಲ್ಲವೇ? ಎಂಬ ಸಂಶಯು. ಹೀಗಾಗಿ ಕಟ್ಟಕಡೆಗೆ

ಸಂತರಿ ಸೇವೆಯಿದೆನಿಪುದ| ಸಂತೋಷದಿಗೆಯ್ಯೆ ಸಕಲ ಸಂಪದಮುಕ್ಕುಂ||
ಎಂತೆನುತಲಲ್ಪಮತಿಯಿಂ| ಕಾಂತೇಶನು ತೋರ್ದತೆರದೆತಿರ್ದಲ್ಪಗೆದೆಂ||

ಇದೂ ಒಂದು ಸಂತಸೇವೆಯೇ ಎಂದು ಬಾವಿಸಿ, ಯಥಾಮತಿ ತಿದ್ದಿರುವೆನಲ್ಲದೆ, ಪಾಂಡಿತ್ಯದ ಹೆಮ್ಮೆಯಿಂದಲ್ಲವೆಂಬುದನ್ನು ತಿಳಿದಿರಬೇಕಾಗಿಯೂ—ಸಕಲ ಭಕ್ತವೃಂದವೂ ಅನನ್ಯಭಾವದಿಂದ ಈ ಗುರುಚರಿತ್ರವನ್ನು ಶ್ರವಣ ಮಾಡಿ, ಪರಮಪಾವನರಾಗಬೇಕಾಗಿಯೂ ಗುಣಜ್ಞರಾದ ವಾಚಕರಲ್ಲಿ ನಮ್ರತೆಯಿಂದ ವಿಜ್ಞಾಪಿಸಿಕೊಳ್ಳುವ,

ಸಾಧು-ಸಜ್ಜನ ವಿಧೇಯು,
ಭೀಮಾಚಾರ್ಯ ವಡವಿ(ಕಾವ್ಯರತ್ನ)
ಶಾಲಾಗುರು, ಕದರಮಂಡಲಗಿ.



॥ಶ್ರೀ ಸದ್ಗುರು ವಾಸುದೇವದತ್ತ ಪ್ರಸನ್ನ॥

ಮೇಶಂಕೇಶಂ ಸುಶಂಭುಂ ಭುವನ ವಸವಶಂ ಮಾಗಹಂ ರತ್ನರತ್ನಂ|
ವಂದೇ ಶ್ರೀ ದೇವ ದೇವಂ ಸುಗುಣ ಗುರುಗುರುಂ
ಶ್ರೀಕರಂ ಕಂಜ ಕಂಜಂ||
ಮಾ ಮಜ್ಞಂ ಮತ್ತ ಮರ್ಭಂ ಭವದ ವಸುವಹಂ
ವಾಶನಾ ಸರ್ವ ಸಂಘೇ|
ಮಾತಃ ಪಾತಃ ಸುತಃ ತೇವಹರಯಸಿ ಹರೇ ದೇಶಿಕೇ
ಶಿಷ್ಯ ಶಿಷ್ಯಂ ||೧||

## ಸದ್ಗುರು ಸ್ತವನ.

ಗುರುಬ್ರಹ್ಮಾ ಗುರುರ್ವಿಷ್ಣು ಗುರುರ್ದೇವೋ ಮಹೇಶ್ವರಃ|
ಗುರುಸ್ಸಾಕ್ಷಾತ್ ಪರಬ್ರಹ್ಮ ತಸ್ಮೈ ಶ್ರೀ ಗುರವೇ ನಮಃ ||೧||
ಬ್ರಹ್ಮಾನಂದಂ ಪರಮಸುಖದಂ ಕೇವಲಂ ಜ್ಞಾನಮೂರ್ತಿಂ|
ದ್ವಂದ್ವಾತೀತಂ ಗಗನ ಸದೃಶಂ ತತ್ವಮಸ್ಯಾದಿ ಲಕ್ಷ್ಯಮ್ ||
ಏಕಂ ನಿತ್ಯಂ ವಿಮಲಮಚಲಂ ಸರ್ವಧೀ ಸಾಕ್ಷಿಭೂತಂ|
ಭಾವಾತೀತಂ ತ್ರಿಗುಣ ರಹಿತಂ ಸದ್ಗುರುಂ ತನ್ನಮಾಮಿ || ೨ ||

---

ಜಯ ಜಯ ಗುರು ಮಹಾರಾಜ ಗುರು|
ಜಯ ಜಯ ಪರಬ್ರಹ್ಮ ಸದ್ಗುರು || ೧ ||
ಝೂಲೀ ಮುಕ್ತಿದಾಯಕ ದಾತಾ ಉದಾರ ಕಲ್ಪತರು || ೨ ||
ರೂಪ ಜಯಾಚೆ ಮನ ಬುದ್ಧಿ ಪರ ವಾಚೆ ಯಾ ಗೋಚರು||೩||
ಅಲಕ್ಷ್ಯ ಅನಾಮ ಅರೂಪ ಅದ್ವಯ ಅಕ್ಷ್ಯೇ ಪರಾತ್ಪರು||೪||
ಆತ್ಮಾರಾಮ ರಾಮದಾಸ ಗೋಪಾಳ ಕರುಣಾಕರು || ೫ ||

---

# ಶ್ರೀ ವಾಸುದೇವ ಚರಿತಾಮೃತ.

## ೧ನೇ ಸಂಧಿ.



||ಪೀಠಿಕಾ ಪ್ರಾರಂಭಃ||

ಶ್ರೀ ಗಣೇಶನೆ ಭಕ್ತವರ್ಗವ |
ನೀಗೆ ಪೊರೆಯುಲು ಬೇಗ ಬಾರೈ |
ಸಾಗುತಿರ್ಪೆ ಯುದೆಲ್ಲಿ ಮೂಷಕವೇರುತವಸರದಿ ||
ನಾಗಭೂಷಣ, ಶಂಕರಾತ್ಮಜ |
ಕೂಗಿ ಕರೆವುದು ಕೇಳಲೊಲ್ಲದೆ? |
ರಾಗದಿಂದಲಿ ಪೊರೆವುದೆಲ್ಲರ ವಿಘ್ನನಾಶಕನೇ || ೧ ||
ಬಂದ ವಿಘ್ನವ ಕಳೆಯುದಿದ್ದರೆ |
ಮಂದಮತಿಗಳದೇನು ಮಾಳ್ಪೆವು |
ಸುಂದರಾಂಗನೆ ಸುಗುಣ ಭರಿತನೆ ಸರ್ವ ಕಾಲದಲಿ ||
ಬಂದು ಪ್ರೇಮವ ತೋರಿ ಮೋಹದ |
ಕಂದರೆನ್ನುತ ಸಲಹು ದೇವನೆ |
ಎಂದಿಗೂ ತವ ನಾಮಭಜನೆಯು ತಪ್ಪದೆಮಗೀಯೈ ||೨||
ಶಾರದಾಂಬೆಯೆ ನೀನು ವೀಣೆಯ |
ಬಾರಿಸಲ್ಕದು ಜಗವ ನೆಲ್ಲವ|
ಪೂರ ಮೋಹದೊಳಿದ್ದು ತಿರ್ಪುದು ಕರುಣಸಾಗರಳೇ ||
ಆರು ನಿನ್ನಿಂ ದೂರವಿರ್ಪರ|
ದಾರು ನಿನ್ನನು ಭಜಿಸದಿರ್ಪರೊ|
ಸಾರ ಸೌಖ್ಯವನವರು ಕಾಂಬರದೆಂತು ಜಗದಂಬೇ || ೩ ||

ಆದಿ ಗುರು ಶ್ರೀ ದತ್ತ ಮೂರುತಿ |
ಪಾದಕೆರಗುತ ಬೇಡಿಕೊಂಬೆನು |
ಬೋಧಕೊಪ್ಪುವ ವಾಸುದೇವಾನಂದ ಚರಿತವನು ||
ಆದರಂ ಮಿಗೆ ಪೇಳಿಸೆಲ್ಲರ |
ಬಾಧೆ ನೀಗಿಸುತುಭಯ ಲೋಕದೆ |
ಪೋದವೀವನು ನೀನೆಯಲ್ಲವೆ? ಕರುಣಸಾಗರನೇ || ೪ ||
ನಿನ್ನ ಚರಿತವ ಪೇಳಿ ಕೇಳಿಸಿ|
ಸಣ್ಣ ಬಾಲರ ಪೊರೆಯದಿದ್ದರೆ |
ಘನ್ನ ಪಾಪದೆ ಬಳಲುತಿರ್ಪರ ಕಾವರಾರಯ್ಯಾ?||
ಇನ್ನು ಪೇಳುವದೇನು ಗುರುವರ |
ನಿನ್ನನೇ ನೆರೆ ನಂಬಿ ಭಜಿಪ |
ಚ್ಛಿನ್ನ ಭಕುತರ ಮುದದಿ ಸಲಹೈ ತಪ್ಪು ಕ್ಷಮಿಸುತ್ತ || ೫
ವರ ದಯಾಘನ ದತ್ತ ಗುರುವರ |
ನಿರುವೆ ನೀನೆಲ್ಲೆಡೆಯೊಳಾದರು |
ದುರುಳ ತನದಿಂ ಕಾಲಗಳೆಯುವ ಪಾಪಿ ಮಾನವರ ||
ಪರಮ ಭಕುತರ ಮಾಡಿ ಸಲಹುವ |
ಸರಣಿ ನಿನ್ನೊಳಗಿಲ್ಲವೇನೈ |
ಪೊರೆಯೊ ದೀನರ, ದೀನರಾದೆವು ನಿನ್ನ ನಂಬದಲೇ|| ೬ ||
ಪೊರೆಯೊ ದತ್ತಾತ್ರಯನೆ ನಿನ್ನಯ |
ಹೊರತು ರಕ್ಷಕರಾರು? ಪೇಳೈ|
ಸಿರಿಯು ಮೇಣದು ಧರೆಯು ನಿನ್ನಯ ಸೂತ್ರಕನುಸರಿಸಿ||
ಚರಿಸುತಿರ್ಪರು ಭಕುತವೃಂದವ |
ಕರುಣವಿಟ್ಟೇ ಕಲಿಯ ಕಾಲದೆ |
ಪೊರೆಯುಬೇಳ್ಕೈ ದೀನಬಂಧುವೆ ವಿಶ್ವರಕ್ಷಕನೇ ||೭||

ನಿನ್ನ ಚರಿತವ ನೀನೆ ಪೇಳಿಸಿ |
ನಿನ್ನ ಭಕುತರ ಕಿವಿಗೆ ಕೇಳಿಸಿ |
ಘನ್ನ ಪಾಪವ ಕಳೆದು ಭಕುತರ ಪೂತರೆಂದೆನಿಸಿ ||
ನಿನ್ನ ಪಾದವ ಭಜಿಪ ತೆರದಿಂ |
ದಿನ್ನು ಸನ್ಮತಿಯಿತ್ತು ಸಲಹೈ |
ಯೆನ್ನ ಸದ್ಗುರು ವಾಸುದೇವಾನಂದ ಯತಿವರನೇ || ೮ ||
ಜ್ಞಾನಿ ಸದ್ಗುರು ವಾಸುದೇವನೆ |
ಕಾಣಲೋಸುಗ ಮನದೊಳಿಚ್ಛಿಸಿ |
ಜಾಣ ಮಾರ್ಗದೆ ನಡೆಯುತಿರುವೀ ಭಕುತವೃಂದದಲಿ ||
ತಾನೆ ಸಂಮಿಳಿತಾಗಿ ಇಂದಿಗೆ |
ನಾನೆಯಾದೆನು ಪರಮ ಧನ್ಯನ |
ದೇನು ಹೇಳಲಿ ಪೂರ್ವಜನ್ಮದ ಸುಕೃತವೆಂತಿಹುದೋ ||೯||
ಸಂತ ಜನರಿಗಸಾಧ್ಯವಾವುದು? |
ಮುಂತೆ ವರುವರುಷಕ್ಕೆ ಸೇವೆಗೆ |
ನಿಂತುಕೊಳ್ಳೈ ದಿವ್ಯ ಮಹಿಮನೆ ಭಕುವತ್ಸಲನೇ ||
ಸಂತವಿಸು ಸದ್ಭಕ್ತ ವರ್ಗವ |
ನಿಂತು ಹೃದಯಾಂಗಣದ ಮಧ್ಯದೊಳ್ |
ಅಂತರಂಗದ ಪ್ರಭುವೆ ನೀಡೈ ವರವನೆಮಗೀಗ|| ೧೦ ||

|| ಪೀಠಿಕಾ ಸಂಧಿ ಸಮಾಪ್ತಂ ||

---

## ೨ನೇ ಸಂಧಿ.

### ಜನನವೂ ಬ್ರಹ್ಮಚರ್ಯವೂ.

ಸೂಚನೆ:— ದತ್ತ ಶ್ರೀ ಗುರುನಾಥ ತನ್ನನು |
ಭಕ್ತಿಯಿಂದಲಿ ಭಜಿಸಿ ಬೇಡುವ|
ಭಕ್ತಗಣಪತಿಗುದಿಸಿ ಬೆಳೆದನು ಬಾಲರೂಪದಲಿ ||೧||

ಕೇಳಿರೈವರ ಕೊಂಕಣಾಖ್ಯದ |
ಮೇಲು ಪ್ರಾಂತದ ಮಾಣಗಾವದೆ|
ಕಾಲ ಕಳೆಯುತಲಿದ್ದನತ್ರಿಯ ಗೋತ್ರ ಬ್ರಾಹ್ಮಣನು ||
ಪೇಳಲೇನಾ ವಿಪ್ರಗಣಪಗ |
ಬಾಳ್ವಿಗನುಕೂಲೆಯುಳು ಮಾನಿನಿ |
ಶೀಲಗುಣಸಚ್ಚರಿತೆಯಿದ್ದಳು ವೈಯು ನೆಳಲಂತೆ || ೧ ||
ಮುಂದೆ ಶ್ರೀ ಗುರುದತ್ತನಿರುತಿಜ |
ಚಂದವಾಗಿಹ ಗಾಣಗಾಪುರ |
ಕಂದು ಪೋಗುತ ತಪವ ಗೈಯುಲು ಪರಮ ಭಕುತಿಯುಲಿ||
ಬಂದು ಸ್ವಪ್ನದಿ ಗುರುವು ನುಡಿದನು |
"ಚಂದದಲಿ ಸಂಸಾರಿಯಾಗುತ|
ಕಂದರನ್ನರೆ ಪಡೆದು ಧರ್ಮದೆ ಕಾಲಕಳೆ"ಯೆಂದು ||೨||
ಯತಿವರೇಣ್ಯನು ಪೇಳಿದಂತೆಯೆ |
ಸತಿಶಿರೋಮಣಿಯೊಡನೆ ಸೌಖ್ಯದೆ|
ಗತಿಸುತಿರಲಾ ಕಾಲವಷ್ಟಕೆ ಗರ್ಭಲಾಂಛನವು ||
ಪೃಥುವಿ ಜನರಿಗೆ ತೋರೆ ಸಮ್ಮುದ|
ವತಿಶಯಂಗಳ ಮನದ ಬಯಕೆಯ|
ಪತಿಯು ಸಲ್ಲಿಸುತಿರ್ದನಂಬರ ಕೇಶನಾಜ್ಞೆಯಲಿ|| ೩ ||
ಬಯಸುತಿರ್ದಳು ದತ್ತಚರಿತೆಯ|
ಬಯಸುತಿರ್ದಳು ಸಂತಲೀಲೆಯ|
ಬಯಸುತಿರ್ದಳಗಾಧನೇಹದೊಳಗತಿಥಿಗಾದರವ||
ಜಯ ನಿನಾದವು ಗರ್ಭದೊಳಗಡೆ|
ನಿಯಮದಿಂದಲಿ ಬಂದ ತೆರದಿಂ|
ಸುಯಿಲು ಬರುವದು ಶ್ರೀಪ್ರಶಿಶುತಾನಿದ್ದ ಪೊಡೆಯಿಂದ ||೪||

ಮನದೆ ಯೋಚನೆಗೆಯ್ದು ಬಹು ಪರಿ।
ಗಣಪ ಬ್ರಾಹ್ಮಣ ದುಗುಡದಿಂದಲಿ।
ಮನಿಕಗೇಕೀ ಪಾರಮಾರ್ಥದ ಚಿಂತೆ ತೊಡಕಿಹುದೋ? ॥
ಎನುತ ಮಲಗಿರಲಿಲ್ಲಿ ಶ್ರೀ ಗುರು ।
"ಚಿನುಮಯಾತ್ಮಕನಿಹನು ಗರ್ಭದೆ।
ತನಯನಾಗೀ ಬರುವನೆ"ಂದನು ಪುಣ್ಯ ವಶದಿಂದ ॥ ೫ ॥
ಕೇಳಿ ಸ್ವಪ್ನದ ಪರಿಯ ಹರುಷವ ।
ತಾಳಿ ವಿಪ್ರನು ದೇವ ಭಜನಾ ।
ಲೋಲನಾಗಿರುತಿರ್ದ ಸದ್ಗತಿ ದಾತನಂ ನೆನೆದು ॥
ಬಾಲನೆಂದಿಗೆ ಬರುವನೊ? ಕರು।
ಣಾಲವಾಲನು ನಮ್ಮ ವಂಶವ ।
ಪಾಲಿಪಾತನದೆಂದು ಬರುವನೊ! ನೋಡಿ ನಲಿಯುವೆನೊ॥೬॥
ಎಂದು ಚಿಂತಿಪರೆಡೆಗೆ ಪರಮಾ ।
ನಂದ ಮೂರುತಿ ಶಿಶುವಿನಂದದ।
ಚಂದವಾಗಿಹ ರೂಪ ತಾಳುತ ಭಕ್ತರಕ್ಷಣೆಗೆ ॥
ತಂದೆ ದತ್ತಾತ್ರಯನು ತಾನಾ।
ನಂದ ವತ್ಸರ ಬಹುಳ ಶ್ರಾವಣ ।
ದಂದು ಪಂಚಮಿ ಶುಭಮುಹೂರ್ತದೆ ಜನ್ಮತಾಳಿದನು ॥ ೭ ॥
ಉದಿತ ಭಾಸ್ಕರ ತೇಜವುಳ್ಳವ ।
ಮುದಿಸಿದಾಕ್ಷಣ ಜಾತಕರ್ಮವ ।
ಮುದದಿ ಗೈಯುತಲಮಿತ ದಾನವ ಕೊಟ್ಟ ಬುಧಗಣಕೆ ॥
ಸದಯ ಮುತ್ತೈದೆಯರು ಪಾಡುತ ।
ವಿದಿತ ಪನ್ನೆರಡನೆಯ ದಿವಸದೆ ।
ಮುದದೊಳಿಟ್ಟರು "ವಾಸುದೇವನು"ಎಂಬ ನಾಮವನು॥೮॥

ಮಲಗು ಮಲಗೈ ದತ್ತರೂಪನೆ|
ಮಲಗಿ ನಿದ್ರಿಸು ಲೋಕ ಜಾಲವ |
ಗಳಿಗೆ ಬಿಡದಲೆ ಸಲಹಿ ದಣಿದಿಹ ದಿವ್ಯ ಪರಮಾತ್ಮಾ ||
ಇಳೆಯ ಜನರೊಳಗುದಿಸಿ ಮೋಹದ |
ಬಳಗರಕ್ಷಿಸಿ ಮಾರ್ಗದೋರಲು|
ತಳುವದೈದಿದ ಬಾಲರೂಪನೆ ಮಲಗು ಸುಖವಾಗಿ || ೯ ||
ಕಂದ ಜೋ-ಜೋ ವಸುಧೆಗಾತ್ಮಾ|
ನಂದ ಜೋ-ಜೋ ಬ್ರಹ್ಮ ತೇಜಾ|
ನಂದ ಜೋ-ಜೋ ಎನುತ ಜೋಗುಳ ಪಾಡಿ ರಮಣಿಯರು ||
ಸುಂದರಾಂಗನ ರನ್ನದೊಟ್ಟಿಲ |
ವಂದು ತೂಗುತಲಿರ್ದು ಪರಮಾ |
ನಂದ ತುಂದಿಲರಾಗಿ ನುಡಿದರು ಧನ್ಯರೆಂದೆನುತ ||೧೦||
ವಾಸುದೇವನು ದಿನದಿನಕೆ ಆ|
ಕಾಶದೊಳಗಿನ ಬಾಲಶಶಿಯೊಲು |
ಭಾಸುರಾಂಗದೆ ಬೆಳೆಯುತ್ತೈದನೆ ವರುಷಕನುವಾಗೆ ||
ತೋಷದಿಂದಜ್ಜನಲಿ ಪಾಠವ|
ನಾ ಸುಗತಿಯಿಂ ಕಲಿಯೆ ಮೌಂಜಿಯ|
ಸೋಸಿ ನಿಂ "* ಪೈಠೀನಸೀ' ಶ್ರುತ್ಯುಕ್ತವೆಸಗಿದನು || ೧೧ ||
ನೆವಕೆ ಗುರುವೆಂದಾಗಿ ವಿದ್ಯೆಯ |
ನವಗೆ ಪೇಳಲ್ಕೇಕಪಾಠದಿ |
ತವಕದಿಂದಲಿ ಪಾಠವೊಪ್ಪಿಸಿ ಬಿಡುವ ಭಗವಂತ ||

---

* "ಗರ್ಭ ಪಂಚಮೆ ಬ್ರಾಹ್ಮಣ ಉಪನಯೀತ" ಎಂಬದಾಗಿ ಪೈಠೀನಸೀ ಶ್ರುತಿಯುಂಟು. ಈ ಶ್ರುತ್ಯುಕ್ತ ಇಷ್ಟು ಚಿಕ್ಕ ವಯಸ್ಸಿನಲ್ಲಿಯೇ ಉಪನಯನವಾಗುವದು ಮಹಾತ್ಮರ ವಿಷಯದಲ್ಲಿಯೇ ವಿನಃ ಇತರರ ವಿಷಯದಲ್ಲಿ ಅಲ್ಲೆಂಬದನ್ನು ಗಮನಿಸತಕ್ಕದ್ದು.

ಅವನೆ ನಿಗಮಾತೀತನಲ್ಲವೆ? |
ಯುವನೆ ಬಾಲಕನಾದನಲ್ಲವೆ! |
ಜವನ ವೈರಿಯು ಧರೆಗೆ ವಟುವಾಗೊಪ್ಪಿ ಬಂದಿಹನು ‖ ೧೨ ‖
ವರುಷವೀರಾರವಗೆ ಗತಿಸಲು |
ವರದ ನಿಗಮಾಗಮವನೆಲ್ಲವ |
ಕರಳಿ ಸಾರ್ದಂತಂದು ತೀರ್ದನು ಸಕಲ ಶಾಸ್ತ್ರವನು ‖
ಇರುತಿರಲು ಮುಂದೊಂದು ದಿನ ಭೂ |
ಸುರನ ಮನೆಯೊಳಗೊಂದು ಗೋವದು |
ಕರೆಯದಮೃತವನೊದೆದು ಹಾಯುತಲಿತ್ತು ಬಹುವಾಗಿ ‖೧೩‖
ಗುರುವು ತಾ ಬಂದಲ್ಲಿ ಸುಮ್ಮನೆ |
ಕರೆಯುವಂತಭಿಮಂತ್ರಿಸುತ್ತಲೆ|
ಹರಕೆಯಿತ್ತದರಿಂದ ಹಿಂಡಿತು ವಿಪುಲ ಕ್ಷೀರವನು ‖
ಕರದೊಳಮೃತವು ಕಣ್ಣೊಳಮೃತವ |
ದಿರುವ ಪ್ರಭುವರಗಮೃತವಾಕ್ಯದೊ |
ಳಿರದೆ? ಸದ್ಗುರು ನುಡಿದ ತೆರವಾದದ್ದು ಸೋಜಿಗವೆ! ‖೧೪‖
ಧರೆಯೊಳೆಷ್ಟೋ ಲೀಲೆಗೆಯ್ದಿಹ |
ಪರಮಪುರುಷನದೊಂದು ದಿನ ತಃ|
ನುರಗೆ ಪಿಡಿಯುತಲಾಡಿಸುತ ಬರುತಿರುವ ಮನೆಮನೆಗೆ ‖
ಹಿರಿವುದೇನ್ನೈ ಭೂತ ಬಾಧೆಗೆ |
ನೆರಳುತಿರುವರ ನೋಡಿದೊಡನೆಯೆ|
ತ್ವರಿತದಿಂದಲಿ ಬಿಡಿಸಿ ಕಾಯ್ವನು ಭಯನಿವಾರಕನು ‖೧೫‖
ಇಂತು ಪದಿನೈದ ್ದವಾಗೆಲ.|
ಸಂತರೂಪದ ವಾಸುದೇವನು |
ಚಿಂತಿತಾರ್ಥವನೀವ ಭಕ್ತಾನಂದ ಸದ್ಗುರುವು ‖

ಎಂತೆನಂತೆಯೆ ಶಿಷ್ಯವೃಂದಕೆ |
ನಿಂತು ವಿದ್ಯವ ಪೇಳಿ "ಶಾಸ್ತ್ರಿಗ |
ಳೆ"ಂತ ಖ್ಯಾತಿಯು ಪಡೆದನೀತನು ಸರ್ವವಿದನಲ್ತೇ? ‖ ೧೬ ‖
ಅತಿಥಿ ಸೇವೆಯು ಗೆಯ್ದು ಪಂಚಾ |
ಯತನ ಪೂಜೆಯು ನಿತ್ಯವೆಸಗುತ|
ಹಿತದಿ ಶ್ರೀ ಗುರು ಹಿರಿಯರಾಜ್ಞೆಯು ನಡಿಸಿ ತೋರಿಸುವ ‖
ಮತಿಯೊಳಿವಗೆಣೆಯಾರದೆಂಬಂ|
ತತಿ ವಿಚಿತ್ರದ ಖ್ಯಾತಿ ವಡೆದನು |
ಕ್ಷಿತಿಗೆ ದಂಪತಿಯಿದುವೆ ಪುಣ್ಯದ ರಾಶಿಯೆಂಬಂತೆ ‖ ೧೭ ‖
ಪಾಕಶಾಸನ ವಂದ್ಯನಾಗಿಹ |
ಲೋಕರಕ್ಷಕ ದತ್ತಮೂರುತಿ |
ಕಾಕುಗುಣಗಳ ಬಿಡಿಸಿ ಭಕ್ತರ ಸಾಕಲೋಸುಗವೇ ‖
ನಾಕದಿಂದೀ ತಾಣಕುದಯಿಸಿ|
ಬೇಕಿದೆಂದೇ ಬಂದ ಕಾರಣ|
ಯಾಕೆ ತಪ್ಪುವ ಧರ್ಮಕಾರ್ಯವ ಮಾರ್ಗದರ್ಶಕನು ‖೧೮‖
ಇರುತ ಶಾಸ್ತ್ರಿಯು ದೇವಪುರದಂ|
ತಿರುವ ಪಂಢರಪುರಕೆ ಮತ್ತಾ |
ವರ ವಿಲಾಸದ ದತ್ತಮೂರ್ತಿಯ ದಿವ್ಯದರುಶನಕೆ ‖
ವರುಷ ವರುಷವು ಬರುತಲಿದ್ದನು|
ಸರಸಿ ಜಾಂಬಕ ಹರಿಯು ಪೂಜೆಯು|
ಪರಮ ಹರುಷದಿ ಗೆಯ್ವ 'ಗೋವಿಂದಾಖ್ಯ'ರಂ ಕಂಡು‖೧೯‖
"ಇರಲು ತಳವನ್ನೀಯು ಬೇಕೈ|
ಭರದೆ ಜ್ಞಾನವ ನೀಡಬೇಕೈ|
ತರಳನಾಗಿರುವೆನ್ನನುದ್ಧೃತಿಗೆಯ್ಯಬೇಕೆ"ಂದು ‖

ಚರಣಕಾನತನಾಗಿ ಬೇಡಲು |
ಗುರುವು ನುಡಿದನು ನಿಮಗೆ ಮಂತ್ರವ|
ನೊರೆಯುವಂಥವ ಶಿವನು ತಾನಿರೆ ನನ್ನ ಪಾಡೇನು || ೨೦ ||
ಹೀಗೆಯಾಡಿದ ನುಡಿಗೆ ಶಾಸ್ತ್ರಿಯು |
ಪೋಗಿ ರಾತ್ರಿಯು ಕಾಲದಲ್ಲೀ |
ರೋಗಹಾರಕವಾದ ಕೃಷ್ಣಾಜಲದಿ ಕಾಲ್ತೊಳೆದು ||
ಬಾಗಿ ಬೇಡುವೆನೆಂದು ದತ್ತನ|
ಬಾಗಿಲಕ್ಕವಸರದಿ ಬರುತಿರೆ |
ಯೋಗಿ ವರ ಶ್ರೀ ದತ್ತದೇವನ ರೂಪವಂ ಕಂಡ ||೨೧||
ಮುಂದೆ ಸಾಷ್ಟಾಂಗದೊಳು ವಂದಿಸಿ|
ಮಂದಮತಿಯನು ಪೊರೆಯಬೇಕೈ|
ಯೆಂದೆನಲು 'ನೀನಾರು? ಇಲ್ಲಿಗೆ ಬಂದೆಯೇತಕ್ಕೆ? ||
ಸಂದ ಸರಿ ರಾತ್ರಿಯಲಿ ಶಯನದ|
ಚಂದದಾರತಿಯಾದ ಮೇಲೆಯು |
ಮಂದಿ ಬಾರರದೆಂಬುದರಿಯಾ? ಮರುಳೆ ನೀನೀಗ' ||೨೨||
ಎಂದು ಗರ್ಜಿಸಿ ತನ್ನ ರೂಪವ |
ನಂದದಿಂ ಗುರುದತ್ತ ತೋರಲು|
"ತಂದೆ ರಕ್ಷಿಸು ತಪ್ಪನೀಗಲೆ ಪೋಪೆನಿಲ್ಲಿಂದ" ||
ಎಂದು ಮತ್ತಾ ಯತಿಯು ಪಾದಕೆ |
ಸಂದಸುವ್ರತಿ ಮುದದಿ ನಮಿಸಲು |
ನಿಂದ ಶ್ರೀ ಯತಿರೂಪವೆದುರಿಗೆ ಕಾಣದಂತಾಯ್ತು || ೨೩ ||

---

ಪದ—"ಧನ್ಯ ಹೋ ಪ್ರದಕ್ಷಿಣಾ" ಎಂಬಂತೆ—
ದತ್ತಾ ಮಜಲಾ ಪ್ರಸನ್ನ ಹೋಸೀ|| ಜರಿ ತೂ ವರ ದೇಸಿ||
ಇದರ ಭಾಷಾಂತರ —

ಏನು ಕೆಟ್ಟೆನೊ? ಈಗ ನೋಡಿದ |
ಜ್ಞಾನಮಯ ಪರಮಾತ್ಮ ರೂಪನ|
ಸಾನುರಾಗದೆ ಬೇಡಿಕೊಳ್ಳುವ ಕಾಲವಂ ಕಳೆದು ||
ನಾನು ಕಂಡಿರುವಂಥ ರೂಪವು|
ತಾನು ಮತ್ತೇಕೀಗ ಕಾಣದೊ?|
ಹಾನಿಗೊಂಡೆನು ದಿವ್ಯಪಾದಸ್ಪರ್ಶಗೈಯದಲೇ ||೨೪||

ಹೀಗೆ ಚಿಂತಿಸಿ ಮಠಕೆ ಬಂದಾ |
ಯೋಗಿವರ್ಯನ ಮುಂದೆ ತನ್ನಯ|
ರೋಗವುಸುರಿದ ಸ್ವಾಮಿ ಪಾದಸ್ಪರ್ಶವಿಲ್ಲದುದ ||
"ಆಗಲಾಗಲಿ ನಿನ್ನ ಭಕ್ತಿಯು |
ಭೋಗವಿದ್ದಂತಪ್ಪುದೈಸಲೆ|
ಯಾಗಬಹುದೈ ನಿನ್ನ ಬಯಕೆಯು ಪೂರ್ಣಪರಿಣಮಿಸಿ"||೨೫||

---

ದತ್ತಾ ನನಗೆ ಪ್ರಸನ್ನನಾಗುವಿ | ಮೋಕ್ಷ ವರಗಳನೀವೀ ||
ಆದರೆ ನಿನ್ನಾ ನೆರವಿನೊಳಿಹುದು| ನಿರ್ಭರ ಮನದಿಂದಾಸನಗೈದು||ಪ||
ನಿತ್ಯಾ ನಿನ್ನಾ ನೆನವೆನಗಿರಬೇಕು| ಮನದಿ ನಿನ್ನಾ ಗುಣ ಪೊಗಳಲು ಬೇಕು ||
ಅನಾಸಕ್ತ ನೇಮದೊಳಿರಬೇಕು|ಇಂತೆನ್ನಾ ಮನವೊಲಿಸಲುಬೇಕು|೧|
ಸರ್ವೇಂದ್ರಿಯಗಳು ಮತ್ತೀ ಮನವು| ನಿನ್ನಾ ವಶದೊಳಿಹವು||
ಆದರಿಂದೀಗಲೆ ಮನ ರಮಿಸುವವು| ಸದಯಾಂತರದಿರವೂ ||೨||
ವಿವೇಕ ಮೋಕ್ಷ ಹಿತವಾದ ಸಂಗದಿ| ಈ ನೇತ್ರಾದಿಂದ್ರಿಯಗಳಹಾದೀ||
ವಾಸುದೇವ ತವಪಾದವ ನೆನೆದೀ| ದೇಹವ ನಿರ್ಮಲಗೊಳಿಸೈ ದಯದೀ ||೩||

ಸ್ವಾ. ರಾ. ನವರತ್ನ

ಅಂದವಾತನು ಕೇಳಿ ಗುರುಗೋ|
ವಿಂದ ಯತಿವರನಾಜ್ಞೆಯಿಂದಲಿ |
ಬಂದನೈ ಶ್ರೀ ವಾಸುದೇವನು ಮಲಗಬೇಕೆಂದು ||
ನಂದದಿಂದಲಿ ನಿದ್ರಿಸುತ್ತಿರೆ|
ಮುಂದೆ ಬೆಳಗಿನ ಜಾವಕಾತಗೆ|
ಚಂದವಾಗಿಹ ದತ್ತಮೂರುತಿ ಕಂಡಕನಸಿನಲಿ ||೨೬||
"ಕೇಳು ಭಕುತರ ರಾಜವೌಳಿಯೆ|
ಕಾಲು ತೊಳೆವಾ ನದಿಯ ಘಾಟನ |
ಮೇಲೆ ದರುಶನವಿತ್ತೆ ಹಿಂದಿನ ದಿವಸ ನಿನಗಾಗಿ ||
ಬಾಲಭಾವದೆ ಮರುಗಬೇಡೈ |
ತಾಳು ನಿನಗುಪದೇಶವಿದಕೋ |
ಬಾಳು ಸದ್ವೃತಿಯಾಗಿ ಲೋಕಕೆ ಧರ್ಮವನ್ನೆಸಗೈ" ||೨೭||
ಎಂಬ ಮಾತಿನ ಮೂರ್ತಿಯನೆ ತಾ |
ನಿಂಬು ಬಿಡದಲೆ ನೋಡಿ ನಲಿದನು |
ಕಂಬು ಕಂತದೊಳಕ್ಷಮಾಲೆಯ ಧರಿಸಿ ಶೋಭಿಪನ ||
ಅಂಬುಜಾಸನ ಕರಕಮಂಡಲ|
ಕಂಬುಚಕ್ರಾಂಬುಜದ ಹರಿಯೊಲು|
ಶಂಬರಾರಿಯ ವೈರಿಯಂತೆಯೆ ಶೂಲ ಪಿಡಿದಿಹನ ||೨೮||

---

ಪದ:— ಗುರುಸ್ತೋತ್ರ ಶ್ಲೋಕ—

ಭಾವೇ ನಮೂ ಶ್ರೀ ಗುರುಚ್ಯಾಪದಾಸೀ| ಇದರ ಭಾಷಾಂತರ
ಗುರುದೇವನಾ ಪಾದ ಭಾವದಲಿ ನಮಿಸಿ |
ಸರುವೆಡರುಗಳ ನೀಗತರಿಯೆನುತ ನೆನೆಸೀ||
ಎರಗಲಾ ತವ ದಾಸ ಪಾದವನು ಸ್ಮರಿಸಿ |
ಪೊರೆಯುವೈ ದಾಸರಿಗೆ ದಾಸನೆಂದೆನಿಸೀ ||೧||

ಪೀತವಸನವನುಟ್ಟು ಕಾಲೊಳು ।
ಖ್ಯಾತಪಾವುಗೆ ಮೆಟ್ಟು ಜಡೆಯೊಳು।
ಪೂತ ಗಂಗೆಯನಿಟ್ಟು ಲೋಕಕೆ ಸೌಖ್ಯ ಕೊಟ್ಟಿರುವಿ॥
ಪೂತು ಶ್ರೀ ಪರಮಾತ್ಮ ಮುನಿಗಣ।
ನಾಥ ಜಗದೊಳು ತ್ರಾತ ಷಡ್ಭುಜ ।
ದಾತ ಸಲಹೈ ಸಲಹು ಮುಕ್ತೀನಾಥ ವಿಖ್ಯಾತ ॥೨೯॥

---

ಸತತ ವಿಗತಗಮ್ಯ ಶ್ರೀಷ್ಮದುಷ್ಟಾ ಅಗಮ್ಯ ।
ಸದಯ ಹೃದಯಲಭ್ಯ ಪ್ರಾರ್ಥಿಸೈ ಮನದಿ ಸಭ್ಯ ॥
ಸಮುದ ವಿಮುದ ದಿರವು ಕಳೆವುದೈಯಾರವರವು।
ಕುಗತಿ ಸುಗತಿ ಕೊಡುವ ಪದಕೆ ಪೊಡಮಡುವೆವಾವ॥೨॥
ಗುರುಪದಾವಿಪದಾಪ ಹರಾ ಸದಾ ।
ಅಭಯದಾ ಭಯದಾ ಮಯದಾರದಾ ॥
ಹೃತವದಾನ್ಯ ಮದಾತವದಾಸ್ಯವೀಯ್ಯೆ।
ಅಮುದ ದಾಸದಾಕುದಾಸ್ಯ ಬಿಡಿಸೈ ॥೩॥
ನಮಸ್ತೇ ಭವಾರೇ ನಮಸ್ತೇ ಶತಾರೇ।
ನಮಸ್ತೇಘ ವೈರೇ ನಮಸ್ತೇಷ್ಟಕರ್ತ್ರೇ ॥
ನಮಸ್ತೇ ಖಲಾದೇವಿಹಸ್ತೇಷ್ಟದಾತ್ರೇ।
ನಮಸ್ತೇರಿ ವೈರೇ ನಮಸ್ತೇಷ್ಟಸತ್ರೇ ॥ ೪ ॥
ಗುರು ಪದದಲಿ ಮುದವುಸರುವ ಭೇದ ಪರಿಹರವು ।
ಗುರು ಪದದಲಿ ನೆನವುಸರುವ ಖೇದ ಪರಿಹರವು ॥
ಸತತವಿನತರಾಗಿ ಗುರುವ ನೆನೆವಂಥ ಜನವು ।
ಸತತ ಸುಖದೊಳಿಹರ್ರೈ ಯೆಂಬದಂ ನೆನೆದು ನಾವು ॥೫॥
ಈ ಗುರುಸ್ತೋತ್ರ ಪಂಚಕವ । ಭಾವದಲಿ ಪಠಿಸುವ ನಾವ॥
ಬೇಗದೆ ಜ್ಞಾನವ ಪಡೆವ। ನೆಂದು ಪೇಳ್ವನಾ ವಾಸುದೇವ॥೬॥
ಸ್ವಾ. ರಾ. ನವರತ್ನ

ಯತಿ ವರೇಣ್ಯನು ವಾಸುದೇವಗೆ |
ಹಿತದೆ ಮಂತ್ರವ ಪೇಳಿ ಕಿವಿಯೊಳು |
ಗತಿಯು ಗಾಣಿಪ 'ದತ್ತ' ನೆಂನುವ ದಿವ್ಯ ನಾಮವನು||
ನುತಿಸುತಿರುವಂತಾಜ್ಞೆಗೈಯುತ |
ಸತತ ಭಕ್ತರ ಹಿತವ ಬಯುಸುವ |
ಪತಿತಪಾವನ ನಡಗಿ ಕಾಣಿಸದಾದ ಸ್ವಪ್ನದಲಿ ||೩೦||
ಎದ್ದು ಕಣ್ದೆರೆಯುತ್ತ ನೋಡಲು |
ಮುದ್ದು ಮೂರುತಿಯೆದುರಿಗಿಲ್ಲವು |
ಬುದ್ಧಿಪೂರ್ವಕ ನಾನು ಮಾಡಿದ ಪಾಪವೇನಿಹುದೋ ||
ಸದ್ಯಕಂತೂ ಪೊರೆಯುಲರ್ಹರು|
ಇದ್ದ ಶ್ರೀ ಗೋವಿಂದ ಪಾದಕೆ |
ಬಿದ್ದು ಬೇಡುವೆನೆಂದು ಬಂದನು ಮನೆಗೆ ಮರುಗುತಲಿ||೩೧||
ಜೀಯ ಯತಿವರನೆನ್ನ ಬಿನ್ನಹ|
ತಾಯಿಯಂದದೆ ಕೇಳಬೇಕೈ|
ಆಯಿತಿಂದಿನ ಬೆಳಗು ಜಾವದೆ ಸ್ವಪ್ನ ಸದ್ಗುರುವೇ ||
ಕಾಯವಾಙ್ಮನದಿಂದ ಭಜಿಸುವ |
ಮಾಯ ರಹಿತನ ದಿವ್ಯದರ್ಶನ |
ವಾಯಿತೈ ಗುರುವರ್ಯ ವರ ಗೋವಿಂದ ಯತಿವರನೇ||೩೨||
"ಸಾಕು ಬಿಡು ನೀ ವಾಸುದೇವನೆ|
ವ್ಯಾಕುಲವು ನಿನಗೇಕ ಬೋಧವು|
ಬೇಕು ನಿನಗೆಂದುದಕೆ ಪೇಳಿದೆ 'ದತ್ತ' ನಾಮವನ||
ಏಕೆ ಸಂಶಯನೀಗಲೊಲ್ಲದೆ?|
ನೂಕು ದಿನಗಳ ಬ್ರಹ್ಮಜ್ಞಾನದಿ |
ಜೋಕೆಗೆಯ್ಯಲೊ ಸತ್ವವೆಲ್ಲವ ತ್ರಿಗುಣ ಮೀರಿದರ್ಥ"||೩೩||

ಎಂದ ನುಡಿಗಳ ಕೇಳಿ ಶಾಸ್ತ್ರಿಯು|
ಬಂದನೈ ತಾ ತನ್ನ ಭವನಕೆ |
ನಂದದಿಂದಲಿ ಪೂತನಾಮವ ಮನದಿ ಜಪಿಸುತ್ತ||
ಮಂದಭಾಗ್ಯರ ಪೊರೆವ ನಾಮವು |
ಬಂಧಮುಕ್ತತೆ ಗೆಯ್ವನಾಮವು|
ಚಂದದಿಂದಲಿ ಮೋಕ್ಷವೀಯುವ 'ದತ್ತ' ನಾಮವದು ||೩೪||

|| ೨ನೇ ಸಂಧಿ ಸಂಪೂರ್ಣಂ ||

———

## ೩ನೇ ಸಂಧಿ.



### ಗೃಹಸ್ಥಾಶ್ರಮವೂ ಪತ್ನಿವಿಯೋಗವೂ.

ಸೂಚನೆ:—ವಾಸುದೇವನು ತನ್ನ ಸತಿಯಿಂ |
ಸೋಸಿನಿಂದಲೆ ಸೇವೆಗೊಳ್ಳುತ|
ಭಾಸುರಾಂಗನು ಕಡೆಗೆ ಪೊಂದಿದ ಸತಿ ಏಯೋಗವನು ||೧||
ಮುಂದೆ ಇಪ್ಪತ್ತೊಂದು ವರುಷಕೆ |
ಸಂದಿ ಪೋಯಿತು ಬ್ರಹ್ಮಚರ್ಯವು |
ಚಂದ್ರಮುಖಿಯಾದನ್ನಪೂರ್ಣೆಯು ಮದುವೆಯಾಗುತ್ತ ||
ಬಂಧುರೆನಿಸುವ ನಡತೆ ಮೇರೆಗೆ|
ಬಂದ ಅತಿಥಿ ಸಮೂಹಕಾದರ |
ದಿಂದ ಸೇವೆಯು ಗೆಯ್ದು ಹರಕೆಯು ಗಳಿಸಿಕೊಂಡಿರ್ದ||೧||
ಪತಿ ಮಹಾತ್ಮನ ಮನಕೆ ಮೆಚ್ಚಿದ|
ಸತಿಯು ತಾನಾಗಿದ್ದು ಲೋಕಕೆ |
ಹಿತವ ಬಯಸುವ ಮೋಕ್ಷದೋರುವ ದಿವ್ಯ ಹೆದ್ದಾರಿ ||

ಪತಿತ ಪಾವನಳಾಗಿ ಸತ್ಯದ |
ವ್ರತವ ಪಾಲಿಪ ಶಕ್ತಿರೂಪದ |
ಸತಿ ಶಿರೋಮಣಿಯೆನಿಪ ಮಾತೆಗೆ ನಮಿಪೆ ನಿತ್ಯದಲಿ ||೨||
ಇಂತು ಸುಗುಣಗಳಿಂದ ಶೋಭಿಪ|
ಕಂತುಪತ್ನಿಯ ಪೋಲ್ವ ರೂಪದ |
ಕಾಂತೆಯೊಡಗೂಡಿದ್ದು ಸಂತಸದಿಂದ ಜಸದಿಂದ ||
ಮುಂತೆ ಕೆಲ ದಿನವಾಗ ವಾಡಿಗೆ |
ಭ್ರಾಂತಿ ಗಳೆವನ ನೋಡಿ ನಲಿಯಲು|
ಶಾಂತ ಮನದಾ ವಾಸುದೇವನು ಬಂದನುತ್ಸವಕೇ ||೩||
ಆಗ ಕಂಡನು ದತ್ತರಾಜನ |
ಭೋಗಿ ಭೂಷಣನಂತೆ ಭಸ್ಮವ|
ರಾಗದಿಂದಲಿ ತಾನು ತಳೆದಿಹ ಪೂತ ಯತಿವರನ||
ಸಾಗುತಿರುವೀ ಪಾದದಲ್ಲಿಯೆ |
ಯೋಗಿವರ್ಯರ ಪೊಳೆವ ಹಾವುಗ|
ಬೇಗ ಕಂಡನು ಪರಮ ಗುರು ವೈರಾಗ್ಯಮೂರ್ತಿಯನು||೪||
ಜಯವು ಜಯವೈ ದತ್ತಮೂರ್ತಿಗೆ |
ಜಯವು ಜಯವೈ ದಿವ್ಯರೂಪಗ|
ಜಯವು ಜಯ ಶ್ರೀ ಪಾದ ವಲ್ಲಭ ಯೋಗಿವರ್ಯನಿಗೆ ||
ಜಯವು ಚಿದ್ಘನ ಪೂರ್ಣದೇವಗೆ |
ಜಯವು ಭಕ್ತಾನಂದ ಮಹಿಮಗೆ|
ಜಯವು ಶ್ರೀ ನರಸಿಂಹವಾಡಿಯ ಕ್ಷೇತ್ರನಾಥನಿಗೆ ||೫||
ಹೀಗೆ ನುತಿಸುತ್ತಿರಲು ಗುರುವರ|
ರಾಗದಿಂದಲಿ ನುಡಿದನಾಗಲೆ |
ಪೋಗಿ ದೇವಾಲಯವ ನಿರ್ಮಿಪುದಲ್ಲಿ ಗೈದುವೆನು||

ಬೇಗ ದಾರಿಯು ನಡೆವ ಕಾಲಕೆ|
ಕೂಗಿ ಕರೆಯುತ"ಲೆನ್ನ ಪ್ರತಿಮೆಯ |
ಜಾಗರೂಕದಿ ಕೊಡುವನೊಬ್ಬನು ಧನವ ನೀನೀಯ್ವೆ"|| ೬ ||
ಎಂದು ಪೇಳುತ ದತ್ತರಾಜನು|
ಮುಂದೆ ಕಾಣದ ಹಾಗೆಯುಡಗಲು |
ಹಿಂದೆ ಮನದಲಿ ವಾಸುದೇವನು ನಮನವಂಗೈಯ್ದು ||
ತಂದೆ ಶ್ರೀ ಗೋವಿಂದ ಯತಿಗಳ |
ಕಂದನಾಗಿಹ ವಾಸುದೇವನು|
ಮುಂದೆ ಹೊರಟನು ಮಾಣಗಾವಿಗೆ ಗುರುವಿನಾಜ್ಞೆಯಲಿ||೭||
ಗುರುವು ಪೇಳಿದ ತೆರದೆ ಮಾರ್ಗದೊ |
ಳಿರುವ ಕಾಗಲವೆಂಬ ಗ್ರಾಮದೆ |
ಬರುತಲೋರ್ವನು ಕೂಗಿಕರೆದನು 'ಮೂರ್ತಿಯಿದನೊಯ್ದು||
ಪರಮಸುಂದರ ದತ್ತಮಂದಿರ|
ವಿರದೆ ಕಟ್ಟಿಸುತಲ್ಲಿ ಸ್ಥಾಪಿಸಿ|
ಹರಕೆ ಹೊಂದಿರಿಯಾನುಕೂಲ್ಯದೆ ಪಣವ ನೀಯುವದು' ||೮||
ಅದಕೆಯೊಪ್ಪುತ ಮೂರ್ತಿಕೊಳ್ಳುತ |
ಮುದದಿ ಮುಂದಕೆ ಬರಲು ಮಾರ್ಗದೊ|
ಳೊದಗಿ ಬಂದವನೊಬ್ಬ ಸುರುವಿದ ಹಣವನುಡಿಯೊಳಗೆ||
ಇದನೆ ಕೊಂಡಾ ಮೂರ್ತಿಕಾರಗೆ |
ಮುದದೊಳಿಪ್ಪತ್ತೈದನೆಣಿಸಿರಿ |
ಹೃದಯ ಶುದ್ಧತೆಯಿಂದ ಪೋಗಿರಿ ನಿಮ್ಮ ಮಂದಿರಕೆ ||೯||
ಎಂದ ತೆರದಿಂ ವಾಸುದೇವನು |
ತಂದು ದ್ರವ್ಯವ ಕೊಟ್ಟು ತನ್ನಯ |
ಮಂದಿರಕೆ ಬಹು ಬೇಗ ಬಂದನು ಮೂರ್ತಿಯೆಡಗೊಂಡು||

ಬಂದು ಶ್ರೀ ಗುರು ದತ್ತನಾಥನ |
ಸುಂದರಾಲಯುವನ್ನು ನಿರ್ಮಿಸಿ |
ತಂದೆ ಶ್ರೀಗುರು ದತ್ತಮೂರ್ತಿಯುನಲ್ಲಿ ಸ್ಥಾಪಿಸಿದ ||೧೦||
ತಾನೆ ತನ್ನಯು ಕರಗಳಿಂದಲಿ |
ನ್ಯೂನವಿಲ್ಲದ ಭಕ್ತಿ ರಸದಲಿ|
ಭಾನುತೇಜನ ದಿವ್ಯದೇವನ ಪೂಜಿಸುತ್ತಿರಲು||
ಏನು ಹೇಳಲಿ ತಂದೆ ದತ್ತನು|
ಜಾಣ ಮಗನಿಗೆ ವಾಸುದೇವಗೆ |
ಮಾಣದಾಶೀರ್ವಾದ ಗೆಯ್ದನು ಪರಮ ತೋಷದಲಿ||೧೧||
"ಏಳು ಬಾಲಕ ನಿನಗೆ ಮೆಚ್ಚಿದೆ |
ಮೇಲು ಮೇಲ್ವೆ ನಿನ್ನ ಭಕುತಿಯು|
ಬಾಳುತಿರುನೀ ಭಕ್ತವರ್ಗಕೆ ಹರಕೆಯುನ್ನಿತ್ತು||
ಕಾಲಕಾಲಕೆ ನಿನ್ನ ನುಡಿಗಳ|
ಪಾಲಿಸುತ್ತಲೆ ನಿನ್ನೊಳಿರುವೆನು|
ಬೀಳಬೇಡ್ವೆ ಭ್ರಮೆಯೊಳವನೀ ಜನರ ತೆರದಿಂದ" ||೧೨||
ಎಂದು ಪೇಳುತ ದೇವ ನಡಗಿದ|
ಚಂದವಾಗಿಹ ತಾಣಕೆರಗುತ|
ಲಂದು ನುತಿಸಿದ ಭಕ್ತಿಪೂರ್ವಕ ಮನದಿ ಹರುಷದಲಿ ||
"ಬಂದೆಯೇನ್ವೆ ನನ್ನ ಮನದೊಳು |
ನಿಂದೆಯೇನ್ವೆ ದಿವ್ಯದೇವನೆ |
ಕಂದರನ್ನೀ ತೆರದಿ ಸಲಹ್ವೆ ಬಿಡದೆ ಜಗದೊಡೆಯು" ||೧೩||

---

ಭಜನದ ಪದ್ಯವು.

ಕೃಷ್ಣಾತೀರೀವಸಣಾರ್ಯಾ|| ಎಂಬದರ ಭಾಷಾಂತರವು.

ಕೃಷ್ಣಾತೀರದಿ ವಾಸಿಸುವ| ಔದುಂಬರದಡಿ ಕುಳ್ಳಿರುವ ||೧||

ಜಯವು ನಿನ್ನಯ ದಿವ್ಯಯ ಶಕ್ತಿಗೆ ।
ಜಯವು ನಿನ್ನಯ ಭಕ್ತವೃಂದಕೆ।
ಜಯವು ಜಯವೈ ನಿನಗೆ ಸಚ್ಚಿತ್ಸುಖ ವಿಲಾಸನಿಗೆ॥
ಭಯ ನಿವಾರಕ ವೇದದಾಯಕ ।
ದಯದಿ ಸಾಗರ ನೀನೆ ರಕ್ಷಕ ।
ಜಯವು ಸಜ್ಜನ ಪಾಲ ಸದ್ಗುಣಶೀಲ ನೆನಿಪನಿಗೆ ॥೧೪॥
ಮಾಣಗಾವದು ಭಕ್ತಜನರಿಗೆ।
ಪ್ರಾಣಪದಕವೆಯಾಗಿ ತೋರ್ವುದು।
ದೀನಜನ ಮಂದಾರ ದತ್ತನ ಸೇವೆ ದಿನದಿನಕೆ॥
ಕ್ಷೋಣಿಗಚ್ಚರಿಯಾಗಿ ಬೆಳೆದುದು ।
ಸಾನುರಾಗದಿ ದೂರದೇಶದಿ ।
ಗಾನ ಮಾಡುತ ಬರುವರಲ್ಲಿಗೆ ದತ್ತ ಗುರುವರನ ॥೧೫॥
ಬರುವ ಭಕ್ತರ ವರ್ಣಮಾನಕೆ।
ಇರುವ ವ್ರತಗಳ ಪೇಳಿ ಪೂಜೆಯ।
ಜರುಗಿಸುತ್ತಲಿ ಸರ್ವ ಜನರನು ಪಾರು ಮಾಡುವನು ॥
ಇರುತಲಿರುತಾ ದತ್ತರಾಜನ।
ವರುಷದುತ್ಸವೆಲ್ಲ ದೇಶದ।
ಪರಸೆ ಬರುವದು ಲಕ್ಷಗಟ್ಟಲೆ ಪರಮ ಹರುಷದಲಿ ॥೧೬॥

---

ಕಾಷಾಯಾಂಬರ ಪೊದೆಯುವವ। ಕಾಲಿನೊಳಾವುಗೆ ಹಾಕುವವ॥೨
ಭಸ್ಮವ ಮೈಯಲಿ ತಳೆಯುವವ।ದಂಡಕಮಂಡಲು ಪಿಡಿಯುವವ॥೩
ತನ್ನಾಭಕ್ತಸ್ಸಂಗದೋರಿರುವ। ಭಕ್ತಾಭಿಷ್ಟವ ಪೂರಿಸುವ ॥೪॥
ಸ್ಮರಿಸಲು ದರ್ಶನ ಕೊಡುತಿರುವ। ವಾಸುದೇವ ಕೈವಾರಿಯುವ ॥೫॥

ಸ್ವಾ. ರಾ. ನವರತ್ನ

ಭವ ವಿದೂರನ ಸೇವೆ ಈ ಪರಿ |
ಸವನಿಸಲ್ಕಾಗೇಳು ವರುಷವು |
ಜವದೆ ಪೋದವು ಮುಂದೆ ಮಾತೃವಿನಾಜ್ಞೆಗನುಸರಿಸಿ||
ಭುವನದೊಳ್ಸಂಚರಿಸಿ ಸುಕ್ಷೇ|
ತ್ರವನೆ ನೋಡುತ ತೀರ್ಥ ಯಾತ್ರೆಯ|
ಹವಣಿಕೆಂದಲೆ ತಮ್ಮಗುಸುರಿದ 'ತಾಯ ಸಲಹೆ'ಂದು ||೧೭||
ಮುಡದಿ ನೀ ಕೇಳೆನ್ನ ಮಾತೃವಿ|
ನಡಿಯ ಸೇವೆಯ ಗೈಯುತಿಲ್ಲಿರು|
ನಡೆದು ಪೋಗುವೆ ತೀರ್ಥಯಾತ್ರೆಗೆ ದೇವ ದಯದಿಂದ||
ನುಡಿಯ ಕೇಳುತ ರಮಣನಾಡಿದ |
ನುಡಿದಳೀ ತೆರ "ನಿಮ್ಮ ಸಂಗಡ |
ನಡೆದು ಬರುವೆನು ಸತಿಗೆ ಸದ್ಗತಿದಾತರಿನ್ನಾರು?" ||೧೮||
ಪಿಂದೆ ಸೀತಾ ಮಾತೆ ರಾಮನ |
ಹಿಂದೆ ಬಂದೇ ಸೇವೆಗೆಯ್ದಳು |
ಚಂದದಾರ್ಯರ ನಡತೆ ಯಾತ್ರೆಗೆ ಬಿಟ್ಟು ಪೋಗುವರೇ?||
ಬಂದು ನಿಮ್ಮಯ ಹತ್ತಿರಿದ್ದಾ |
ನಂದ ಸುಖದುಃಖಂಗಳೂಟಕೆ|
ಹೊಂದಿಕೆಂದಿರುತಿರ್ಪೆಯೆನ್ನನು ಕೊಂಡು ಪೋಗುವದು||೧೯||
ಅದಕೆಯೊಪ್ಪುತ ವಾಸುದೇವನು |
ಸುದತಿಯೆನಿಸಿರ್ದನ್ನಪೂರ್ಣೆಗೆ|
ಮುದದಿ ಸಂಗಡ ಹೊರಡಲಪ್ಪಣೆಗೊಟ್ಟು ಮಾತೃವಿನ||

---

ಪದ. ಚಾಲ. ಮಲಾ ಶಾಂತಮುನಿ ಭಾಸತೋ| ಎಂಬಂತೆ
ನರಾದತ್ತ ಗುರು ಹೇ ಪರಬ್ರಹ್ಮ ಆಹೆ| ಎಂಬದರ ಭಾಷಾಂತರ.

ನರರಿಗೀ ದತ್ತಗುರು ಪರಬ್ರಹ್ಮನಿರುವ |
ಅರಿದು ಜಾಗ್ರತರಾಗೆ ಮೋಹವನು ಕಳೆವ ||ಪಲ್ಲ||

ಪದಕೆ ವಂದಿಸಿ ದತ್ತ ಭವನದೆ!
ಪದುಳದಿಂದಲ್ಲಿದ್ದ ಮೂರುತಿ|
ವಿದಿತವಾಗೊಪ್ಪಿರುವ ಪಾದುಕೆ ಕೊಂಡು ಹೊರವಂಟ||೨೦||

---

ದತ್ತ ಗುರು ಮನ್ಮನದಿ| ದತ್ತ ಗುರು ಕಣ್ಣಿನೊಳು |
ದತ್ತ ಗುರು ವಚನದೊಳು ಕಿವಿಯು ತುಂಬಾ ||
ದತ್ತ ಗುರು ಹೊರಗಿಹನು| ದತ್ತ ಗುರು ಒಳಗಿಹನು|
ದತ್ತ ಗುರು ಸರುವಾಂತರದೊಳು ತುಂಬಿಹನು ||೧||
ದತ್ತಗುರು ಬ್ರಹ್ಮನು ದತ್ತ ಗುರು ವಿಷ್ಣುವು|
ದತ್ತ ಗುರು ರುದ್ರನು ಸತ್ಯನವನು ||
ದತ್ತ ಗುರು ತಾರಕನು ದತ್ತ ಗುರು ಕಾರಕನು|
ದತ್ತ ಗುರು ಲೋಕಶಕ್ತಿಗೆ ಸಾಕ್ಷಿಯಿಹನು ||೨||
ದತ್ತ ಗುರುವಿನ ಹೊರತು ಜನರಿಗೇನೂ ಸಿಗದು |
ದತ್ತ ಗುರುವಿನ ಹೊರತು ದೇವತೆಗಳಿಲ್ಲ ||
ದತ್ತ ಗುರುವಿನ ಹೊರತು ಯಾವ ಫಲವೂ ಸಿಗದು |
ದತ್ತ ವರದನ ಬಿಟ್ಟು ಭೋಗದೊಳಗಿಹರೇ? ||೩||
ಫಲವು ಭೋಗದೊಳು ಮಾಯಾ ಮಯವು ಮೇಣ್ಪೂರ್ವ|
ಫಲವೆಲ್ಲ ಭೋಗದಾಶೆಯೊಳು ಕೊಳೆಯುವದು ||
ಫಲ ನಷ್ಟ ಗೆಯ್ವ ಮೋಹಕ ಭೋಗಗಳ ಬಿಟ್ಟು |
ಫಲವೀವ ದತ್ತ ಗುರು ಪಾದ ಸೇವಿವುದು ||೪||
ಭೋಗ ಯಾಗಗಳಲ್ಲಿ ಸವಿಯು ಶೃಂಗರ ಬೇಡ|
ಯೋಗದಲಿ ಸಡಗರಿಲ್ಲದೆ ಮೋಹದೂಡು||
ಸಾಗದ್ಯೈ ಧರೆಯು ಜನ ಚಿತ್ತದತ್ತನ ಹೊರತು|
ಜಾಗು ಮಾಡದೆ ನೆನೆಯೊ ಮನದಿ ದತ್ತನನು ||೫||
ದತ್ತನನು ಬಿಟ್ಟು ಈ ಯುುಗದಿ ಸಾಧನ ಸೈಯು |

ಇಂತು ಪುರವನು ಬಿಟ್ಟು ಮುಂದಕೆ |
ಸಂತರಾಜನು ಬರಲು ಜನರತಿ |
ಚಿಂತೆಯಿಂ ಪ್ರಾರ್ಥಿಸಿದರೆಮಗಿನ್ನಾರು ಗತಿಯೆಂದು ||
"ಭ್ರಾಂತ ಮನದಿಂ ಬಳಲಬೇಡಿರಿ |
ಚಿಂತೆನೀಗಿರಿ ಸಂತತೀಶ್ವರ |
ಚಿಂತನೆಯೊಳಿರೆ ಫಲವು ದೊರಕುವದೆ" ನುತ ಪೇಳಿದನು||೨೧||
ಮುಂದೆ ಮಾರ್ಗಕ್ರಮಣ ವೆಸಗುತ |
ಚಂದವಾಗಿಹ ವಾಡಿಗೈದುತ|
ತಂದೆ ಶ್ರೀಗುರು ದತ್ತ ಮೂರ್ತಿಗೆ ಭಕ್ತಿಯಿಂದೆರಗಿ ||
"ಬಂದೆವೈ ತವ ಪಾದ ದರ್ಶನ|
ದಿಂದ ಧನ್ಯರದಾದೆವೈ ನಿಜ|
ಮುಂದೆ ಜನ್ಮಾಂತರದಲಾದರು ನೀನೆ ಸಲಹಯ್ಯ"||೨೨||
ಎಂದು ಪರಿಪರಿಯಿಂದ ನುತಿಸು|
ತ್ತೊಂದೆ ಮನದಾನಂದದಿಂ ಗೋ|
ವಿಂದ ಯತಿವರನಡಿಗೆ ವಂದನೆಗೆಯ್ದು ಹರಕೆಯನು ||
ತಂದುಕೊಂಡನು ತಾನದಲ್ಲಿಯೆ |
ಹಿಂದು ವತ್ಸರವಿರಲು ಪತ್ನಿಯು|
ಹೊಂದಿ ಮೆರೆದಳು ಗರ್ಭಲಾಂಛನವನ್ನಪೂರ್ಣಾಂಬೇ ||೨೩||
ಬರಲು ನವಮಾಸಂಗಳವಳಿಗೆ |
ಪರಮಪುತ್ರನು ಜನಿಸಿ ತೋರ್ದನು|
ಹರುಷವಾಯಿತು ತಂದೆ-ತಾಯಿಗೆ ಕಾಲಕನುಸರಿಸಿ ||

---

ಮತ್ತಿಲ್ಲ ಶಾಸ್ತ್ರ ಮೋಹದಿ ಬರಿದೆ ಬಳಲೇ ||
ದತ್ತ ಗುರು ದೇವನಿವ ದತ್ತ ಭವತಾರಿಯೆಂ |
ದುತ್ತರದೆ ಪೇಳಿದಾ ವಾಸುದೇವ ||೬||
ಸ್ವಾ. ರಾ. ನವರತ್ನ

ಇರಲು ಕೆಲಕಾಲಕ್ಕೆ ಶಿಶುವದು |
ಹರನ ಲೋಕಕೆ ತೆರಳಿತಕಟಾ |
ಬರಹ ತಪ್ಪಿಸಲರ್ಹರಾರೈ? ಪಣೆಯೊಳಿದ್ದುದನು ||೨೪||
"ಸತ್ತ ಮಗುವನು ನೆನೆದು ಕಣ್ಣಿನೆ|
ವ್ಯರ್ಥ ಕೆಡಿಸುವದೇನು ಚಂದವು|
ಮೃತ್ಯು ಗೆಲ್ಲುವ ಬಗೆಯು ಜಗದೊಳು ನರರ ವಶಕಿಹುದೇ||
ಅತ್ತರೇನವ ಮತ್ತೆ ಬರುವನೆ? |
ಹೆತ್ತ ಜನರೇನಮರರಿರುವರೆ?|
ಮತ್ತೆ ಪೇಳುವೆ ಕೇಳು ಮಾನಿನಿ ವ್ಯರ್ಥ ಬಳಲದಿರು"||೨೫||
"ನಿನ್ನ ಮನಸಿನ ತಾಪ ತಗ್ಗಿಸು|
ಸನ್ನುತಾಂಗನ ಭಜಿಸು ಪೂಜಿಸು|
ಉನ್ನತೋನ್ನತ ಸೌಖ್ಯವೀವನ ಹೃದಯದೊಳಗಿರಿಸು ||
ಮಣ್ಣಿನಲಿ ಪುಟ್ಟಿರ್ದ ಕಾಯವು|
ಮಣ್ಣುಗೂಡಿದರೇತಕಳುವದು |
ಘನ್ನ ಮಹಿಮನ ಶಿವನ ಚರಣವ ನಂಬಿ ಸುಖಿಸುವದು"||೨೬||
"ಮೋಹ ಪಾಶವ ಹರಿದು ನೀ ಬಿಡು |
ದೇಹದಭಿಮಾನವನು ಸಲೆ ಸುಡು |
ಬಾಹುಗಳ ಬಲವಿದ್ದ ಕಾಲಕೆ ಪುಣ್ಯವಂ ಮಾಡು||
ರಾಹು ಚಂದ್ರಮನನ್ನು ತುಡುಕುತ|
ರೂಹುಗಡಿಸಲು ಮತ್ತೆ ಚಂದ್ರನು |
ರೂಹಪಡೆವುದ ತಿಳಿದು ಮನಸಿನ ದುಃಖವಂ ದೂಡು" ||೨೭||
ಇಂತು ಪಲ ತೆರದಿಂದ ಹೃದಯದ |
ಶಾಂತ ಸದ್ಬೋಧವನೆ ಪೇಳುತ|
ಭ್ರಾಂತಿ ನೀಗಿಸಲಾಗ ತೋರ್ದುದು ದಿವ್ಯ ತೇಜವದು ||

ಸಂತಜನ ಸಕಲಾಪ್ತ ವರ್ಗವು |
ಕಂತುಪಿತ ಕಮಲಾಕ್ಷನಂದದೊ |
ಕಂತರಾತ್ಮಗೆ ತಾನು ಕಂಡುದು ಜ್ಞಾನಬಲದಿಂದ ||೨೮||
ಸತಿಯು ಮೋಹವ ಕಡಿದು ಸಜ್ಜನ|
ತತಿಯು ಪಾಲಿಪ ದತ್ತರಾಜನ |
ನುತಿಸಿ ಪೊರಟನು ಪೂಜ್ಯ ಗೋವಿಂದಾಖ್ಯ ಗುರುಗೃಹಕೆ||
ಅತಿ ಮುದದಿ ಪೊಡಮಟ್ಟು ಗುರುವಿಗೆ |
ಸತತ ಭಕುತರ ಪೊರೆದು ವರ ಸ|
ದ್ಗತಿಯು ನೀವನ ಬೇಡಿಕೊಂಡನು ಪೊರಡಲಪ್ಪಣೆಯು ||೨೯||
ಗುರುವಿನಾಜ್ಞೆಯು ಪಡೆದು ತನ್ನಾ |
ಪರಮ ಸತಿಯಾದನ್ನಪೂರ್ಣೆಯು |
ನಿರದೆ ಕರಕೊಂಡಲ್ಲಿ ನಿಲ್ಲದೆ ಪೊರಟನಾ ಶಾಸ್ತ್ರಿ ||
ಬರುತ ಕಂಡನು ದಿವ್ಯ ಕೊಲ್ಹಾ |
ಪುರವ ಪೊಗುತಲಿ ಜಗದ ಜನನಿಯು|
ಚರಣ ದರ್ಶನಕೊಂಡು ಮುಂದಕೆ ಭರದೆ ನಡೆತಂದ ||೩೦||
ಗಂಡ-ಹೆಂಡಿರು ಭಕ್ತಿಭಾವದಿ|
ಪಾಂಡುರಂಗನ ಪುರಕೆ ಬರುತಲಿ |
ಕಂಡರಲ್ಲಿಯೆ ಅಂತರಂಗದ ಮಂಡಲಾಧಿಪನ ||
"ಗಂಡುಗಲಿ ಶ್ರೀ ಪಾಂಡುರಂಗನೆ|
ಕಂಡೆವಿಂದಿಗ ನಿನ್ನ ಪಾದವ|
ಕಂಡು ನಾವತಿ ಧನ್ಯರಾದೆವು ಸಲಹೊ ದಯದಿಂದ"||೩೧||
"ಚಂದ್ರಭಾಗಾ ತೀರದಲ್ಲಿ|
ರ್ಇಂದಿರಾಪತಿ ಪಾಂಡುರಂಗನೆ |
ಮಂದಭಾಗ್ಯರ ಪೊರೆವ ಮಹಿಮನೆ ವರದ ವಿಠ್ಠಲನೇ ||

ಚಂದ್ರಶೇಖರ ಗೆಳೆಯ ಜಯ ಜಯ |
ಬಂದ ದುರಿತವ ದೂರಗೆಯ್ವನೆ |
ಸುಂದರಾಂಗನೆ ಸರ್ವಜಗವನು ದಯದೆ ಪಾಲಿಪುದು"||೧೨||
ಎಲ್ಲರಂತರ್ಯಾಮಿ ಶ್ರೀ ಹರಿ|
ಬಲ್ಲ ಜನರಿಂಗಭಯವೀವನೆ|
ಕಲ್ಲು ಮನಸಿನ ಪಾಪಿ ಮನುಜರ ಪೊರೆವ ಪ್ರಭುವರನೆ ||
ಬಲ್ಲಿದನು ವರ ರಕ್ಷಕಾಗ್ರಣಿ |
ಯಿಲ್ಲವೇನ್ನೈ ನಿನ್ನ ಪೊಡೆಯೊಳ್|
ಎಲ್ಲಲೋಕವು ತುಂಬಿನಿಂತಿದೆ ಪೊರೆಯೊ ಎನ್ನೊಡೆಯ||೧೩||
ನಿನ್ನ ಪಟ್ಟದ ರಾಣಿ ಲಕುಮಿಯು |
ತನ್ನ ಮನಬಂದಂತೆ ಲೋಕದೆ|
ಘನ್ನ ಕಾರ್ಯವ ಗೆಯ್ದು ಮೋಹದ ಜಾಲ ಬೀರುವಳು ||
ನಿನ್ನ ಪ್ರೇರಣೆಯಾಗದಿದ್ದರೆ |
ಮುನ್ನ ಪಾರಾಗುವದು ದುಸ್ತರ |
ವೆನ್ನುತಿರ್ಪರು ಬಲ್ಲ ಮಾನವರದಕೆ ಬೆದರುವೆನು ||೧೪||
ಇಂತು ನುತಿಸುವ ವಾಸುದೇವನ|
ಸಂತವಿಡಲಿಕ್ಕೆಂದು ವೇಷವ|
ನಾಂತು ಬಂದನು ಕೈಗೆ ಕೊಟ್ಟನು ಹುರಿದ ಕಡಲೆಯನು ||
ಅಂತು ಕೊಟ್ಟುದ ತಿನ್ನಲಾರದೆ |
ಕಂತೆ ಗಟ್ಟಿಡಲಂದಿನಿರುಳೊಳು |
ಚಿಂತೆಗಳೆವಾ ಪಾಂಡುರಂಗನು ಸ್ವಪ್ನದೊಳು ತೋರ್ದ||೧೫||
"ನೂಕಿ ನೀನಾ ಫಲವ ಭಕ್ಷಿಸ|
ದೇಕೆ ಬಿಟ್ಟೆಯೆಲೇ ಪೇಳ್ವುದೆನ್ನಲು" |
'ಕಾಳು ಪೇಟೆಯ ಕಡಲೆಯನುರೆ ತಿನ್ನಲಾಗುವವೇ?'||

“ಸಾಕು ಸದ್ವ್ರತನಾಗಿ ಬಾಳ್ವೆ |
ಬೇಕದಿಲ್ಲದೊಡಿಲ್ಲದಾಗಲಿ|
ಜೋಕೆ ನೀನೀ ವ್ರತವ ತಪ್ಪದೆ ಪಾಲಿಸೈಯೆಂದ” ||೧೬||
ಎದ್ದು ಕಣ್ದೆರೆಯುತ್ತ ನೋಡಲು|
ಬಿದ್ದ ಸ್ವಪ್ನವು ಬಯಲದಾಯಿತು|
ಇದ್ದ ಕಡಲೆಯು ಗಂಟದೆಲ್ಲಿಯೊ ಮೊದಲೆ ಪೋಗಿತ್ತು ||
ಚೋದ್ಯ ಪಡುತಾ ಪಾಂಡುರಂಗನು |
ಬುದ್ಧಿಗಲಿಸಲ್ಕಿಂತು ಗೆಯ್ದನೆ? |
ಬಿದ್ದು ಬೇಡುವೆನಾತಗೀಗಲೆ ತಪ್ಪು ಕ್ಷಮಿಸೆಂದು ||೧೭||
“ತಪ್ಪಿ ನಡೆದೆನು ನಡತೆಯೆಲ್ಲವ|
ತಪ್ಪಿ ನುಡಿದೆನು ನುಡಿಯನೆಲ್ಲವ|
ನೊಪ್ಪಿಕೊಳ್ಳ್ಯ ಮಂದಮತಿಗಳ ತಂದೆ ನೀನಲ್ಲೆ?||
ಅಪ್ಪ ನೀನೇ ಯಲ್ಪಸ್ವಲ್ಪಾ |
ಗಿಪ್ಪತಪ್ಪಿಗೆ ಶಿಕ್ಷೆ ಗೈಯು |
ಲ್ಕಪ್ಪಿಕೊಳ್ಳುವರಾರು? ದೇವನೆ ದಯದಿ ರಕ್ಷಿಪುದು ||೧೮||
ಮುಂದೆ ಗಂಗಾ ಖೇಡವೆನ್ನುವ |
ಚಂದವಾಗಿಹ ಪುರಕೆ ಬರುತಲಿ |
ಮಂದಹಾಸದಿ ಪತ್ನಿಯೊಡಗೊಂಡಿರಲದೊಂದು ದಿನ ||
ಚಂದದೀರ್ವರು ಸ್ವರ್ಗಲೋಕಕೆ |
ಬಂದು ಸೇರಲು ಬೇಕದೆನ್ನುವ” |
ನಂದದಿಂದಾಕಾಶವಾಣಿಯು ಕೇಳ್ಸಿತ್ತು ಶಾಸ್ತ್ರಿ|| ೧೯ ||
ಇದನು ಕೇಳುತ ವಾಸುದೇವನು|
ಸುದತಿಯೆನಿಪಳ ನಾಲ್ಕು ದಿವಸಕೆ |
ಮುದದೊಳೊಯ್ಯಲು ಬರುವದೀಗಳೆ ಬಾರೆ ನಾನೆಂದ ||

ಇದನು ತಿಳಿದಾ ಅನ್ನಪೂರ್ಣೆಯು |
ಸದಯಕಾಂತನ ಪದಕೆ ನಮಿಸುತ |
ಲೊಡಗಿಬಂದಿಹ ಪಯಣಕೋಸುಗರಮಣನಾಜ್ಞೆಯನು||೪೦||
ಪಡೆದು ಜಯ ಜಯ ನಾದದಿಂದಲಿ |
ನಡೆದು ಪೋದಳು ಬ್ರಹ್ಮಲೋಕ |
ಕ್ಕೊಡನೆ ಕೂಡಿದ ಭಕ್ತವೃಂದವು ಪುಣ್ಯವನು ಪೊಗಳೇ||
ನಡೆವ ನಡತೆಯ ನೋಡಿ ಮನುಜರು|
ಜಡ ಶರೀರಕೆ ಮೋಹಗೊಳ್ಳದೆ|
ಕಡೆಗೆ ಸದ್ಗುರುನಾಥನಂಘ್ರಿಯ ಪಡೆವುದುತ್ತಮವು||೪೧||
ಆಯಿತಿಲ್ಲಿಗೆ ವಾಸುದೇವನ|
ಹೋಯಿತಿಲ್ಲಿಗೆ ಪತ್ನಿ ಬಂಧನ|
ಮಾಯೆಯೆಲ್ಲವು ಸರಿದು ನಿರ್ಭಯನಾಗಿ ಮನದೊಳಗೆ ||
ಜೋಯಿಸರು ಪೇಳ್ದಂತೆ ಪತ್ನಿಯ |
ಕಾಯಕರ್ಧ್ವದ ಕೃತಿಯ ಗೆಯ್ಯುತ |
ಮಾಯೆ ವರ್ಜಿತ ನಿಚ್ಚೆಯೊಲು ತಾನಾದ ನಿರ್ಲಿಪ್ತ||೪೨||

|| ೫ನೇ ಸಂಧಿ ಸಂಪೂರ್ಣಂ ||

---

## ೬ನೇ ಸಂಧಿ.



### ತೀರ್ಥಾಟನೆಯೂ ಭಕ್ತಪಾಲನೆಯೂ.

ಸೂಚನೆ:—ಸತಿಗೆ ಸದ್ಗತಿಯಿತ್ತ ಬಳಿಕೀ |
ಕ್ಷಿತಿಯೊಳೆಲ್ಲೆಡೆ ತೀರ್ಥಯಾತ್ರೆಗೆ |
ಯತಿವರನು ಹೊರಟಂಟ ಭಕ್ತರ ಪೊರೆಯುತನವರತ ||೧||

## ಸದ್ಗುರು ಸಂದರ್ಶನ.

ಒಂದು ದಿನ ಗೋವಿಂದ ಯತಿ ವರ ।
ನಂದದಿಂದಲಿ ಶಾಸ್ತ್ರಿ ಭವನಕೆ ।
ಬಂದು "† ಪ್ರೇಷೋಚ್ಚಾರ"ವಿತ್ತನು ವಾಸುದೇವನಿಗ॥
"ಕಂದ ಕೇಳೈ ನಿನ್ನ ಪೆಸರಿನ।
ಮುಂದೆ ಸರಸತಿಯೆಂದು ಜೋಡಿಸು ।
ತಿಂದಿನಿಂದಲೆಯುತ್ತ ಮಧುಕರಿಯೂಟವಂ ಮಾಡೈ"॥೧॥

## ಸಂನ್ಯಾಸ ಗ್ರಹಣ.

ಕನಸಿನೊಳು ಶ್ರೀ ದತ್ತ ಗುರುವರ ।
ನೆನುವುದೋರಿದ ರೀತಿಯುಂದದೆ।
ಘನ ಸುವಿದ್ಯಾವಂತ ಬ್ರಾಹ್ಮಣರನ್ನು ಕರೆಯಿಸುತ ॥
ವಿನಯದಿಂ ಸನ್ಯಾಸಕೊಳ್ಳುತ।
ದಿನವ ಕಳೆಯ್ವ ಜಗಕೆ ಸತ್ಕೃತಿ।
ಮಿನಗುವಂದದೆ ಬಾಳ್ವುದೆಂದನು ಪರಮ ಗುರುವರನು ॥೨॥

## ಶ್ರೀ ಮಂಡಲೇಶ್ವರ ದರ್ಶನ.(ನರ್ಮದಾತೀರ)

ವಾಸುದೇವಾನಂದ ಯತಿವರ।
ದೇಶದೇಶವ ತಿರುಗಿ ರೇಣುಕ।
ವಾಸವಾಗಿರುವಲ್ಲಿ ಗೃದುತ ದರ್ಶನಂಗೊಂಡು॥
ದೋಷ ನೀಗುವ ನದಿಯು ತಟದೊಳು ।
ವಾಸವಾಗಿಹ ಮಂಡಲೇಶಗೆ।
ಭಾಸುರಾಂಗನು ಬಾಗಿ ನಮಿಸುತ ಮುಂದೆ ನಡೆತಂದ ॥೩॥

---

† ಪ್ರೇಷೋಚ್ಚಾರ=ಯತ್ಯಾಶ್ರಮಕ್ಕೆ ಅಪ್ಪಣೆ ಕೊಡೋಣ.

## ಉಜ್ಜನೀಪುರ ಪ್ರವೇಶ.

ಉಜ್ಜನೀ ಪುರದಲ್ಲಿ ವಾಸಿಸು|
ವಜ್ಜ ಶ್ರೀ ಗುರುದತ್ತ ಭಕುತನ |
ಬಿಜ್ಜ ಪೇಳಿದ ಪೂಜ್ಯನಾರಾಯಣನ ಕಂಡೊಡನೆ||
ಕಜ್ಜವೆಸಗಲು ಭಕ್ತರಕ್ಷಣೆ|
ಸಜ್ಜ ನೀನಾಗುತಲಿ ಮೋದದಿ|
ಮಜ್ಜಗತ್ತಿಗೆ ಧರ್ಮಗಲಿಸಲು ಪೊರಡು ನೀನೆಂದ ||೪||

## ಶ್ರೀ ಹರಿದ್ವಾರ ಕ್ಷೇತ್ರ.

ಎಂದು ಹರಕೆಯ ಕೊಂಡು ಬಹು ವಿಧ|
ದಿಂದ ನಾನಾ ಕ್ಷೇತ್ರ ತಿರುಗುತ |
ಬಂದು ಹರಿದ್ವಾರದೊಳು ಚಾತುರ್ಮಾಸ್ಯವೆಸಗಿದನು||
ಮುಂದೆ ಬದರೀನಾಥಗೆರಗುತ|
ಸಂದ ಬ್ರಹ್ಮಾವರ್ತ ನೋಡುತ|
ತಂದೆ ಶ್ರೀ ಗುರುದತ್ತನಂಘ್ರಿಯ ನೆನೆಯುತ್ತೈತಂದ ||೫||

## ಮಾರ್ಗಸ್ಥಳ ಚಮತ್ಕಾರ.

ಯತಿಯು ರೂಪದೆ ಪುಣ್ಯ ತಳಗಳ|
ಗತಿಸಿ ಬರುತಿರಲೊಂದು ಗ್ರಾಮದಿ |
ಪತಿತನಾಗಿಹನೊಬ್ಬ ತನ್ನಯ ಮಗಳನೀರ್ವರಿಗೆ ||
ಮತಿವಿಹೀನತೆಯಿಂದ ಲಗ್ನವ|
ಗತಿಯಗಾಣದೆ ಮಾಡಿ ಕೊಟ್ಟರೆ|
ಮೃತಿಯ ಪೊಂದಿದನೆರಡನೇವರನದಕೆ ಬಾಂಧವರು ||೬||
ಪಿಡಿದವಳ ಮುತ್ತೈದೆ ತನವನು |
ಕೆಡಿಸ ಬಂದರು ಮೊದಲಿನಿನಿಯನು|
ತಡೆದನಾಗಲೆ ಕಲಹ ನಡೆದುದ ನೋಡಿ ಯತಿವರನು||

ಕಡು ದುರಾತ್ಮಕರೂರೊಳಗೆ ತಾ|
ನಡೆಯುಬಾರದೆನುತ್ತ ಪೊರಡುತ |
ಗಿಡದ ಬುಡದಲಿ ಕುಳಿತುಕೊಂಡನು ವ್ಯಗ್ರಚಿತ್ತದಲಿ||೭||

## ನರ್ಮದಾ ಪ್ರತ್ಯಕ್ಷ.

ಅಷ್ಟರಲಿ ಶ್ರೀ ನರ್ಮದಾಂಬೆಯು |
ಶ್ರೇಷ್ಠ ಯತಿವರನಲ್ಲಿ ಗೈದುತ|
ಸ್ಪಷ್ಟ ನುಡಿದಳು "ಬೇರೆಯೂರಿಗೆ ನೀನು ಪೋಗೆ"ಂದು||
ಶ್ರೇಷ್ಠ ನರ್ಮದೆ ನುಡಿಯ ಕೇಳುತ |
ಶಿಷ್ಟ ಯತಿವರ ದೇವಿಗೆರಗುತ|
ಸೃಷ್ಟಿಗೀಶನ ಮನದೆ ನೆನೆಯುತ ಮತ್ತೆ ತಾ ಪೊರಟ ||೮||

## ಶ್ರೀ ವಾಡಿ ಕ್ಷೇತ್ರ.

ಖ್ಯಾತವಾಗಿಹ ವಾಡಿ ಕ್ಷೇತ್ರದ|
ನಾಥದತ್ತನ ಪೂಜಕಾವಳಿ|
ನೀತಿಗನುಚಿತವಾದ ವಸ್ತುವನೆಡೆಯು ಮಾಡುತಿರೆ||
ಭೂತನಾಥಗೆ ಬೇಡವಾಗಲು |
ಪೂತದಂಡಣದಿಂದ ದತ್ತನ|
ಮೂರ್ತಿ ಬಿದ್ದಿತು ಕೆಳಗೆ ಪಾಲಕಿ ಸೇವೆಗೆಯ್ಯುತಿರೆ ||೯||
ಇದನು ಕಾಣುತ ಭಯದೊಳರ್ಚಕ |
ರೊದಗಿ ಬಂದರು ವಾಸುದೇವನ|
ಪದಕೆ ವಂದಿಸಿ ಬೇಡಿಕೊಂಡರು "ಗೆಯ್ವುದಿನ್ನೇನು"||
ಬುಧಶಿರೋಮಣಿ ದತ್ತರಾಜನ|
"ಹೃದಯ ಶುದ್ಧಿಯೊಳರ್ಚಿಸಲ್ಕತಿ |
ತುದಿಯ ಕಾಂಬಿರಿ ಧರ್ಮರತರಾಗಿರಲು ಬೇಕೆಂದ ||೧೦||

"ಶ್ರೀ ದಿಗಂಬರ ದತ್ತಗುರುವರ|
ಮೋದಪೂರಿತ ಮಾಯೆ ಪರಿಹರ |
ನಾದಿ ಗುರು ಶ್ರೀ ಪಾದ ವಲ್ಲಭ ದತ್ತಗುರುವರನೇ ||
ಭೋ ದಯಾನ್ವಿತ ಸ್ವಾಮಿ ಯತಿವರ |
ಪಾದ ಭಕುತರ ಪೊರೆವ ಭವಹರ |
ಆದರಂವಿಗೆ ಕಾಯಬೇಕೈ ದತ್ತಗುರುವರನೇ" ||೧೧||
ಹೀಗೆ ಪೂಜಕರೇಕಚಿತ್ತದಿ |
ಯೋಗಿವರ್ಯನ ನೆನೆಯುತಿಹಪರ|
ಭೋಗವನ್ನರೆ ಪಡೆದು ಮೆರೆದರು ಗುರುವಿನಾಜ್ಞೆಯಲಿ||
ಹೀಗೆ ಸಕಲರು ಸ್ವಾಮಿದೇವನ|
ಬೇಗು ರಾತ್ರಿಯೊಳೇಕಚಿತ್ತದಿ |
ರಾಗದಿಂ ಮಿಗೆ ನೆನೆದು ಮನದೊಳು ಧನ್ಯರಾಗುವದು ||೧೨||

## ಮಾರ್ಗಸ್ಥಳ (ಭಕ್ತಪಾಲನೆ)

ಮುದದಿ ಸದ್ಗುರುವೊಂದು ಗ್ರಾಮಕೆ |
ಬುಧರ ಕೇರಿಯೊಳನ್ನ ಭಿಕ್ಷಕೆ|
ಯೊದಗಿ ಬಂದಿರಲಲ್ಲಿ ಬ್ರಾಹ್ಮಣನೊಬ್ಬ ದುಃಖದಲಿ||
ಉದರದೊಂದೇ ಕರದಿ ನೀಡಲು |
ಸದಯನಾದಾ ಯತಿವರೇಣ್ಯನು|
"ಬುಧನೆ ನಿನಗಾಗುವದು ಕೆಲದಿನದಲ್ಲಿ ಬಿಡುಗಡೆಯು"||೧೩||
"ಅದರ ದೆಸೆಯಿಂ ನೀನೆ ನಿಶ್ಚದೆ|
ಪದುಮ ಬಾಂಧವನುದಯಕಾಲಕೆ|
ಹೃದಯ ಶುದ್ಧಿಯೊಳೀಶನಂಘ್ರಿಯ ನೆನೆಯುತಿರುಕಂಡ್ಯಾ||
ಮೊದಲು ಜನ್ಮದೆ ಸಾಲತೀರ್ಚದೆ|
ಹುದುಗಿ ಬಂದಿಹೆಯಾದ ಕಾರಣ |
ತುದಿಗೆ ದುರ್ಗತಿ ಬಂದುಸೇರಿದೆ ತಿಳಿದು ನೀ ನೋಡೈ" ||೧೪||

ಆಗೆ ಮಾಡಿರುವಂಥ ಸಾಲವ|
ನೀಗೆ ತೀರಿಸಿ ಹರಕೆಗೊಂಡರೆ |
ಯಾಗಬಹುದೈ ನಿನಗೆ ಸ್ವರ್ಗದ ಸುಖವು ಬಹು ದಿವಸ||
ಭೋಗೆ ಬಿಡುವದೆ? ಜನ್ಮ ಜನ್ಮಕೆ |
ರೋಗೆ ರೂಪದಿ ಕಾಡಿ ಸೇಡನು|
ಹೋಗಲಾಡಿಸಿಕೊಂಡುಬಿಡುವದುಋಣವುಬೇಡಯ್ಯ"||೧೫||
ಇಂತು ಶ್ರೀ ಗುರು ವಾಸುದೇವನು |
ಶಾಂತ ಮನದಿಂ ಬ್ರಾಹ್ಮಣಂಗೆಯು |
ಚಿಂತೆಗಳೆವಾ ಮಾರ್ಗದೋರಲು ಸಾಲ ತೀರಿಸಿದ||
ಬಂತು ಪುಷ್ಪಕ ಋಣವಿಮುಕ್ತತೆ|
ಗೆಂತು ಫಲತಾನಿರ್ಪುದೆಂಬುದ|
ನಿಂತು ತೋರುತ ದತ್ತ ದಯದಿಂ ಸುಖವ ತಾಳಿದನು ||೧೬||

## ಶ್ರೀ ಕಾಶೀ ಕ್ಷೇತ್ರ

ವಾಸುದೇವಾನಂದ ಯತಿವರ |
ಕಾಶಿ ಮೊದಲಾದಖಿಳ ಕ್ಷೇತ್ರದೆ|
ವಾಸಗೆಯ್ಯುತ ನಡೆದು ಬಂದನು ನರ್ಮದಾ ತಟಕೆ||
ಭೂಸುರೋತ್ತಮನಾದ ನಾನಾ |
ಶಾಸ್ತ್ರಿಯೆಂಬವರಿಂಗೆ ಮಾರಿಕೆ|
ಗಾಸಿಗೆಯ್ದಿರಲಲ್ಲಿ ದತ್ತನಿಗವಧಿ ಬೇಡಿದನು ||೧೭||

## ನರ್ಮದಾ ತೀರ (ಭಕ್ತಪಾಲನೆ)

ಹೇ ದಯಾನಿಧೆ ದತ್ತಗುರುವರ|
ಪಾದಭಕುತರ ಪೊರೆವ ಪ್ರಭುವರ |
ಭೂದಿವೌಕಸನೀತನೂರಿಗೆ ಹೋಗುವನಿತಕ್ಕೆ||

ಬಾಧೆ ನಿಲ್ಲಿಸು ಬಳಿಕ ನಿನ್ನಯ |
ಆದಿಮಾಯೆಯು ಬಂದು ಸೇರಲಿ|
ಸಾಧಿಸಿಪ್ಪನು ಮಾತ್ರ ನಡಿಸೈ ಕರುಣಸಾಗರನೇ ||೧೮||
ಬೇಡಿಕೊಂಡಂತಂದಿನಿಂದಲಿ|
ಬಾಡಿದಂತವಯುವದೆ ಚೇತನ |
ಮೂಡಿ ನಡೆದನು ಬ್ರಾಹ್ಮಣೋತ್ತಮ ತನ್ನ ಗ್ರಾಮಕ್ಕೆ ||
ಆಡಲೇನ್ನೈ ಮುಂದೆ ಮರುದಿನ |
ರೂಢಿಗನುಸರಿಸಿರ್ದ ಮೃತ್ಯುವು|
ಆಡುತಾಡುತ ಬಂದು ಬಿಟ್ಟಿತು ಗುರುವಿನಾಜ್ಞೆಯಲಿ ||೧೯||

## ಶ್ರೀ ನಾಡೀ ಕ್ಷೇತ್ರ

ನಾಡಿಯೊಳಗಿನದೊಂದು ಸುದ್ದಿಯ|
ನಾಡಿತೋರುವೆ ಕೇಳ್ವುದೆಲ್ಲರು|
ನಾಡಿಗರೆಯನ ದಿವ್ಯಪಾದುಕೆಗೆರೆದ ಬಿಸಿನೀರು ||
ಮೂಡಿಸಿತ್ತಾ ಯತಿಯ ಮೈಯಲಿ|
ಜೋಡಿಸಿರ್ಪುದ ಗುಳ್ಳೆ ರೂಪದಿ|
ನೋಡಿಯರ್ಚಕ ವರ್ಗ ಬೆದರುತ ಸೋಜಿಗಂಗೊಂಡು||೨೦||
ದತ್ತ ಪಾದುಕೆಗೆರೆದ ಎಸರಿನ|
ಸತ್ವವಿಲ್ಲಿಗೆ ಬಂದು ಮೂಡಿತು |
ಮತ್ತೆ ಭೇದವದೇನು ಇವರಿಗೆ ದತ್ತಪ್ರಭುವಿಂಗೆ||
ಚಿತ್ತದೊಳ್ತಿಳಿಯುತ್ತ ಯತಿಯನು|
"ಮತ್ತೆ ಈ ತೆರಗೆಯ್ಯದಿರುವೆವು |
ವ್ಯರ್ಥಗೆಯ್ದಿಹ ತಪ್ಪು ಕ್ಷಮಿಸುವದೆ''ಂದು ಬೇಡಿದರು ||೨೧||

## ಶ್ರೀ ತಿರುಪತಿ ಕ್ಷೇತ್ರ

ಮುಂದೆವಾಡಿಯು ಬಿಟ್ಟು ನಡೆಯುತ|
ಚಂದದೆನಿತೋ ನದಿ-ಪುರಂಗಳ|
ವೃಂದದಾಟುತ ನಡೆದು ಬಂದನು ಕ್ಷೇತ್ರ ತಿರುಪತಿಗ||
ತಂದೆ ವೇಂಕಟರಮಣಗೊಂದಿಸಿ|
ಯೊಂದು ಗ್ರಂಥವ ರಚಿಸುತದರಾ |
ನಂದದಿಂದ ಕುಮಾರ ಶಿಕ್ಷೆಯುಡೆಂಡು ಕರೆದಿಹರು ||೨೨||
ಅಲ್ಲಿ ಈ ತೆರಗೆಯುದ್ದದಲ್ಲದೆ|
ಎಲ್ಲ ಕಡೆಗಾ ಗ್ರಂಥ ತೀರ್ಥವ|
ಸಲ್ಲಿಸುತ್ತಲೆ ಖ್ಯಾತಿಗೊಂಡನು ಬರೆದು ಸಂಹಿತೆಯು ||
ಎಲ್ಲರೋದುವ ಹಾಗೆ ಸುಲಲಿತ|
ಬಲ್ಲ ಸಂಸ್ಕೃತವಾಣಿಯಿಂದಲೆ|
ಎಲ್ಲ ಕಡೆಯುಲದೊಪ್ಪುತಿರುವದು ನೋಡಿ ನಲಿಯುವದು||೨೩||

## ಸದ್ಗುರು ಲೀಲೆ[ಹಾವನೂರು]

ಮುಂದೆ ಕೇಳಿರಿ ಗುರು ಚರಿತ್ರೆಯು |
ಸಂದ ತುಂಗಾತೀರದಲ್ಲಿಯೇ|
ಚಂದವಾಗಿಹ ಸರ್ಪನಗರಿಗೆ ಬಂದನೈ ಗುರುವು||
ಬಂದ ಪರತರ ಯತಿವರೇಣ್ಯನ |
ಮುಂದಭಾಗ್ಯರ ಪೊರೆವ ಮಹಿಮನ |
ನಂದದಿಂ ಕೆಲ ಜನರು ಕಂಡರು ಹರನ ಗುಡಿಯೊಳಗೆ ||೨೪||
ಬಂದನೈ ಶ್ರೀ ಗುರುವರೇಣ್ಯನು|
ಬಂದನೈ ಪರಬೊಮ್ಮ ರೂಪನು|
ಬಂದನೈ ಕಡು ಘೋರ ಭವಭಯ ತಿಮಿರ ಭಾಸ್ಕರನು ||

ಬಂದನೈ ಕರುಣಾಬ್ಧಿ ಚಂದ್ರನು|
ಬಂದನೈ ವರ ಸುಗುಣಸಾಂದ್ರನು |
ಬಂದನೈ ಭೂಲೋಕ ಸುರತರು ಭಕ್ತಸುರಧೇನು ||೨೫||
ಬಂದನೈ ವರ ಭಕ್ತವಂದ್ಯನು|
ಬಂದನೈ ಶತ ಭಾನುತೇಜನು|
ಬಂದನೈ ಗುರುರಾಯ ನಿತ್ಯಾನಂದ ಚಿನುಮಯನು ||
ಬಂದನೈ ವರ ಸುಗುಣಹಾರನು|
ಬಂದನೈ ಸಂಕಟ ನಿವಾರನು|
ಬಂದನೈ ವರಭಕ್ತರನ್ನುರೆ ಪೊರೆವ ಯತಿವರನು||೨೬||
ಬಂದನೈ ಗುರು ದತ್ತಮೂರ್ತಿಯು|
ಬಂದನೈ ತ್ರಿಭುವನ ಸುಕೀರ್ತಿಯು|
ಬಂದನೈ ಗುರುನಾಥ ವರ ಕೈವಲ್ಯದಾಯಕನು||
ಬಂದನೈ ಜಗದಾದಿ ಶಕ್ತನು|
ಬಂದನೈ ಯತಿ ಚಕ್ರವರ್ತಿಯು|
ಬಂದನೈ "ಶ್ರೀ ವಾಸುದೇವಾನಂದ ಸರಸತಿಯು ||೨೭||
ಇಂತು ಬಂದಿಹ ಯೋಗಿವರ್ಯನು|
ಚಿಂತೆಯಿಲ್ಲದೆ ಕಾಲಕಳೆಯಲು|
ಕಂತುಹರ ದೇವಾಲಯದೆ ಬಹು ಮುದದಿ ನೆಲೆಗೊಂಡು||
ಸಂತಧರ್ಮದ ಕರ್ಮವನು ನಿ|
ಶ್ಚಿಂತೆಯಿಂದಲಿ ಸಾಗಿಸುತ್ತಲೆ|
ಯಂತರಂಗದ ಭಕುತ ಜನರಿಗೆ ಬೋಧಗೊಡುತಿರ್ದ ||೨೮||
"ಇನ್ನು ಚಿಂತೆಯು ಪಡುವದೇತಕೆ|
ಇನ್ನು ಭವ ಭಯ ಬಂಧವೇತಕೆ|
ಇನ್ನು ಭ್ರಾಂತಿಯ ತೊರೆದು ಶಾಂತಿಯ ಪಡೆಯೆ ತಡವೇಕೆ?||

ಘನ್ನ ಯತಿವರ ತಾನು ಬಂದರೆ|
ಸನ್ನುತಾಂಗನ ಭಜಿಸಿ ಪೂಜಿಸಿ|
ಮುನ್ನ ಕರ್ಮವ ಕಳೆವುದೆಂದಿತು" ಸುಜನ ಸಂದೋಹ||೨೯||
ಕೆಲರು ಗುರುವನು ನೋಡಿ ದಣಿದರು|
ಕೆಲರು ಗುರುವನು ಪಾಡಿ ದಣಿದರು|
ಕೆಲರು ಗುರುವನು ಭಜಿಸಿ ದಣಿದರು ಭಕುತವೃಂದದೊಳು||
ಕೆಲರು ಗುರುವನು ಬೇಡಿ ದಣಿದರು|
ಕೆಲರು ಗುರುವನು ಕಾಡಿ ದಣಿದರು|
ಕೆಲರು ಗುರುವಿನ ಮಹಿಮೆ ತಿಳಿಯದೆ ದಣಿದರೇನೆಂಬೆ ||೩೦||
ಇರಲು ವೈಷ್ಣವ ವನಿತೆಯೊಬ್ಬಳು |
ತೆರಳಲಾರದೆ ತನ್ನ ಪದದಿಂ|
ಪರಮ ಕಷ್ಟವ ಸೋಸುತಿರ್ದಳು ಗಂಟು ಕಾಲಾಗಿ ||
ತರುಣಿ ಮಾಧ್ವಳ ಬಂಧುವರ್ಗವು |
ಪರಮ ಗುರುವಿಗೆ ತಂದು ತೋರಿಸೆ|
ಕರುಣಸಾಗರ ತಾನು ಪೇಳ್ದನು "ಭೂತಭಯವೆ"ಂದು||೩೧||
ಇಂತು ಭಾಷಿಸುತಾಗ ಯತಿವರ|
ಶಾಂತಮನದಿಂ ದುಷ್ಟ ನಿಗ್ರಹ |
ಕಂತು ಯತ್ನಿಸಿ ಮಂತ್ರಪೂರಿತ ಜಲದಿ ಪ್ರೋಕ್ಷಿಸಲು ||
ಭ್ರಾಂತಿ ವೈತುಂಬುತ್ತ ನಡೆಯಿತು|
"ಪಿಂತೆಯೆನ್ನನು ಕಾಡಿದಿವಳಲಿ|
ನಿಂತೆನಲ್ಲದೆ ಬಿಟ್ಟು ನಡೆದೆನು ತಮ್ಮ ದರುಶನದಿ" ||೩೨||
ಎಂದು ನುಡಿಗಳ ನುಡಿಯುತಾಕೆಯು|
ಮುಂದೆ ಮೇಲಕ್ಕೆದ್ದು ಗುರುವಿಗೆ|
ನಂದದಿಂ ಶಿರಬಾಗಿ ನಮಿಸುತ ಪೇಳ್ದಳಿಂತೆಂದು ||

“ತಂದೆ ಗುರುವರ ನಿನ್ನ ದಯದಿಂ |
ಚಂದವಾಯಿತು ನನ್ನ ದೇಹವು|
ಮುಂದೆ ನೆನೆವೆನು ಗುರುವೆ ನಿನ್ನನು ಸಾವಪರಿಯಂತ”||೩೩||
ಗುರುವಿನಾಟವನಿನ್ನು ಕೇಳಿರಿ|
ತರಳಭಾವದ ಕೆಲರು ಬಾಲರು|
ಕರುಣವಿಲ್ಲದೆ ಕಲ್ಲನೊಗೆಯುತ ಕಷ್ಟ ಕೊಡುತಿರಲು ||
ಕರುಣವಿದ್ದವ ತಾನು ಮುನಿವನೆ? |
ಪರಮ ಹರುಷದಿ ನಗುತ ಬಾಲರ|
ಕರೆದು ಕೊಡುವನು ಕಲ್ಲುಸಕ್ಕರೆ-ಹಣ್ಣು ಹಂಪಲವ ||೩೪||
ಒಂದು ದಿನವಾ ಯೋಗಪುರುಷನು|
ಚಂದದಿಂದಲಿ ಭಿಕ್ಷೆಗೋಸುಗ|
ಬಂದನೈ ಮನೆಮನೆಗೆ ಪೋಗಲು ಮಂದಮತಿಯೊಬ್ಬ||
ಅಂದು ಮಣ್ಣನು ಭಿಕ್ಷೆ ನೀಡಲು|
ಚಂದವೆನ್ನುತಲದನೆ ತಿಂದನು|
ನಂದಮೂರ್ತಿಯ ಶಾಂತಿಸತ್ವವ ಪೊಗಳಲಸದಳವು ||೩೫||
ಮಂದ ಮಾನಸದೋರ್ವ ಮಾನವ|
ನಂಧತನದಿಂ ಪೂಜ್ಯ ಯತಿಗಳ|
ಚಂದ ಮಹಿಮೆಯ ತಿಳಿಯಲಾರದೆ ನಿಂದೆಗೆಯ್ಯುತಿರೆ||
ಒಂದು ದಿನವಾ ದುರುಳ ಮನುಜನು|
ಮಂದಹಾಸದಲೆರಡು ಕಡೆಯೊಳ|
ಗೊಂದೆ ಕಾಲದೆ ಯತಿಗಳಿರ್ದುದ ಕಂಡು ಬೆರಗಾಗಿ ||೩೬||
ನೊಂದು ಮನದೊಳು ತನ್ನ ಕೃತ್ಯಕೆ|
“ಮಂದಭಾವದಿ ವಿಶ್ವದೊಡೆಯನ|
ನಿಂದೆಗೆಯ್ದಿಹೆನ”ೆಂದು ಯತಿಗಳ ಬಳಿಗೆ ತಾ ಬಂದು||

“ತಂದೆ ಗುರುವರ ನಿನ್ನ ತಿಳಿಯದೆ|
ನಿಂದೆ ಗೆಯ್ದಿಹ ಕಡು ದುರಾತ್ಮನು|
ಕಂದನೆಸಗಿದ ತಪ್ಪ ಮನ್ನಿಪುದೆ’’ನುತ ಪೊಡಮಟ್ಟ ‖೩೭‖
ಕರುಣೆ ಗುರುವಿನ ಭಕ್ತನೊಬ್ಬನ|
ಪರಮ ಕಡುತರ ಕ್ಷಯದ ಬೇನೆಯ |
ನಿರದೆ ಲೀಲಾ ಮಾತ್ರದಿಂದಲಿ ಕಳೆದು ರಕ್ಷಿಸಿದ ‖
ಧರೆಯ ಮನುಜರ ಘೋರ ಭವವನು |
ಭರದಿ ಕಳೆಯುತ ಭಕ್ತವೃಂದಕೆ |
ಪರಮ ಪದವಿಯನೀವ ಗುರುವನು ಪೊಗಳಲಸದಳವು‖೩೮‖
ಬರಲು ಚಾತುರ್ಮಾಸ ವ್ರತವದು|
ಗುರುವದಿಲ್ಲಿಯೆ ಕಳೆಯಲೆಂದಾ|
ಪುರದ ಭಕುತರು ಸರ್ವ ಸಿದ್ಧತೆ ಗೆಯ್ದರೈ ತಾವು‖
ಇರಲು ದೂರಿನ ಭಕುತವೃಂದವು |
ಪರಮ ಹರುಷದಿ ಬಂದು ಸೇರುತ|
ಲಿರದೆ ಗುರುಗಳ ಸೇವೆಗೆಯ್ಯುತ ಧನ್ಯರೆನಿಸಿದರು ‖೩೯‖
ದಿನದಿನವು ಮಿಷ್ಟಾನ್ನ ಭೋಜನ|
ಘನ ಯತಿಯ ವರ ದಿವ್ಯ ದರುಶನ|
ಚಿನುಮಯನ ಬಹು ಪುಣ್ಯಕೀರ್ತನದಿಂದ ಭಕುತಗಣ ‖
ಘನ ಮುದದಿ ಲೋಲಾಡುತಿರ್ದುದು|
ಘನ ಮಹಾತ್ಮನ ಯೋಗದಿಂದಲಿ|
ಘನ ಸುರೇಶ್ವರ ನಗರಿಯಂದದೊಳೊಪ್ಪಿ ತಾ ಗ್ರಾಮ‖೪೦‖

## ಶ್ರೀ ಹರಿಹರ ಕ್ಷೇತ್ರ

ಹೀಗೆ ಚಾತುರ್ಮಾಸ ವ್ರತವನು |
ಯೋಗಿ ಕಳೆಯುತ ಭಕುತವೃಂದಕೆ |
ರಾಗದಿಂದಾಶೀರ್ವದಿಸಿ ವರ ಕ್ಷೇತ್ರ ಹರಿಹರಕೆ ‖

ಸಾಗಿ, ವೈಷ್ಣವ ಸ್ಮಾರ್ತ ವರ್ಗಕೆ।
ಯೋಗ್ಯ ವಹವರ ರೂಪ ತಾಳಿಹ ।
ಭೋಗಿ ಶಯನಗೆ ಭೋಗಿಭೂಷಗೆ ಬಾಗಿ ನಮಿಸಿದನು॥೪೧॥

## ಶ್ರೀ ಶೃಂಗೇರಿ ಕ್ಷೇತ್ರ.

ಮುಂದೆ ಶ್ರೀ ಗುರು ಶೃಂಗಗಿರಿಗಾ।
ನಂದದಿಂದಲಿ ಬಂದು ಸರಸತಿ।
ಚಂದವಾಗಿಹ ಪೀಠಕೊಂದಿಸಿ ವಿಪಿನ ಮಾರ್ಗದಲಿ॥
ಸಂದ ಶ್ರೀ ಬನವಾಸಿ ಗೈದುತ ।
ತಂದೆಯಾದಾದತ್ತ ರಾಜನ।
ಹೊಂದಿಕಿಂದಲೆ ಜನ್ಮದುತ್ಸವ ನಡೆಸಿ ಹೊರವಂಟ ॥೪೨॥

## ಶ್ರೀ ಗೋಕರ್ಣ ಕ್ಷೇತ್ರ.

ನಾಕದೊಡೆಯು ಪಿನಾಕದರಜಗ।
ದೇಕನಾಥ ಮಹಾಬಲೇಶ್ವರ।
ವ್ಯಾಕುಲಾತ್ಮರ ಸಲಹಲೋಸುಗ ನಿಂತ ತಾಣಕ್ಕೆ ॥
ಗೋಕರಣವೆಂದೆಂಬ ಪೆಸರಿದೆ।
ಯಾಕೆ ತಡ ತಾನೆಂದು ಪೋಗುತ।
'ಸಾಕಿ ಪಾಲಿಪುದೆ'ನುತ ಸಾಂಬಗೆ ಮುದದಿಪೊಡಮಟ್ಟ॥೪೩॥
ಅಲ್ಲಿ ಲಿಂಗಾಯುತರ ಮಠದಲಿ।
ನಲ್ಲೆಯೋರ್ವಳಿಗೆಚ್ಚರಿಲ್ಲದೆ।
ಕಲ್ಲಿನಂದದೆ ಬೀಳುತಿರ್ದಳು ಪಕ್ಷಕೊಮ್ಮೆಮ್ಮೆ ॥
ಬಲ್ಲ ಜನರೆನಿತಗದಕೊಟ್ಟರು।
ಕಲ್ಲ ಮೇಲ್ಮಳೆಗರೆದೊಲಾಗಲು।
ವಲ್ಲಭ ಶ್ರೀ ವಾಸುದೇವಗೆ ತಂದು ತೋರಿದರು ॥೪೪॥

"ತಂದೆ ಪಾಲಿಸು ಮಗಳ ದೇಹದ |
ಚಂದ ನೋಡ್ಯೆ ಯತಿವರೇಣ್ಯನೆ |
ಮಂದಮತಿಗಳು ನಾವು ಜನ್ಮಾಂತರದ ಪಾಪದಲಿ ||
ಬೆಂದು ಬಳಲುತ್ತಿಹೆವು ನೋಡೈ |
ಕಂದರಪರಾಧವನೆ ಕ್ಷಮಿಸುತ|
ಮುಂದೆಯುಂ ನೀ ಬಾಧೆ ನೀಗಿಸಿ ಸಲಹೊ ಸದ್ಗುರುವೇ"||
ಆಗ ನುಡಿದನು ಯೋಗಿವರ್ಯನು |
"ಈಗ ದತ್ತಾತ್ರಯಗೆ ಸ್ತೋತ್ರಲು|
ಸಾಗಿ ಬಂದರೆ ವ್ಯಾಧಿ ಪೋಪುದು ತಾನು ನಿಶ್ಚಯದಿ"||
ರಾಗದಿಂದುಸುರ್ದಂತೆ ಯೆಸಗಲು|
ರೋಗ ನಿಲ್ಲದೆ ಪೋಯಿತಾಕ್ಷಣ|
ಯೋಗಿ ನುಡಿದುದು ಪುಸಿಯದಪ್ಪುದೆ ಯಾವ ಕಾಲಕ್ಕು||೪೬|

## ಆಕಾಶವಾಣಿಯು.

ಲೋಕದೀಶರ ಭಕ್ತವರ್ಗಕೆ|
ಬೇಕು ಬೇಕಾದಂಥ ವರಗಳ |
ನಾ ಕೃಪಾಕರ ನೀಡಿ ರಕ್ಷಣೆಗೆಯ್ಯುತಿರುವಾಗ್ಗೆ ||
"ಜೋಕೆ ಜೋಕೆಲೊ ನಿನ್ನ ದೇಹಕೆ |
ಕಾಕು ಕಾಲವು ಬಹುದು ಕೆಲದಿನ|
ನೂಕಬೇಕ್ಕೆ ಸತ್ವಶಾಲಿಯುದೆ"ಂದುದಾಗಸವು ||೪೭||

## ಕೋಪರಗಾಂವ ವಾಸ.

ಅಂದತೆರದಿಂದಿರುವ ಕಾಲಕೆ |
ಬಂದು ಸೇರ್ದುದು ಗುರುವಿನಂಗವ|
ಬೆಂದುಸುಯ್ವುರೆವಂಥ ದುರ್ಧರ ಜ್ವರವು ಭರದಿಂದ ||

ಮುಂದೆ ಕೋಪರಗಾಂವದೆಂಬಾ |
ಚಂದದೂರೊಳು ದಿವಸವೆರಡನು|
ಸಂದ ಮಾತ್ರಕುಸರಿಯುಲಿಲ್ಲವು ವಿಧಿಯು ಮಹಿಮೆಯುಲಿ||೪೮||
'ಪಡೆದು ಬಂದುದನುಂಡು ತೀರ್ಚದೆ|
ಬಿಡದು ಯಾರಿಗದೆ'ಂಬದನ್ನುರೆ|
ಪೊಡವಿ ಜನರಿಗೆ ತೋರಲೋಸುಗ ನಿಂತ ಗುರುನಾಥ ||
ಹಿಡೆಯು ಯತಿವರ ಬೇಡೆ ಮಜ್ಜಿಗೆ |
ಯೊಡನೆ ಗರ್ವದ ಪಾರ್ವರೆನಿಬರು|
ಕೊಡದೆ ನೂಕಿದರಕಟ ತಳಮಳಗೊಂಡ ಗುರುರಾಯ||೪೯||
ಇಂತು ಬಳಲುವ ಗುರುವಿಗೋರ್ವನು |
ಸಂತರೂಪದ ಶಿಷ್ಯನಿದ್ದನು |
ಚಿಂತೆಗೆಯ್ದನು "ಬೇನೆ ತಾನೇಕಿಂತು ಬಂದವುದೋ? ||
ಕಂತುಹರನವತಾರನಾಗಿಹ |
ಶಾಂತಮೂರುತಿಗಿವರು ಮಜ್ಜಿಗೆ |
ಗಿಂತುನುಡಿವರೆ! ಕಲಿಯು ಮಹಿಮೆಯುದೆಂತು ದುರ್ಧರವೋ"||
ಎಂದು ಮನೆ ಮನೆಯಾಚಿಸಲ್ಕಾ |
ಬೆಂದ ಮನದಾ ದುಷ್ಟಮತಿಯಿಂ|
ದಂಧರಾಗಿಹ ಪಾರ್ವರಾರುಂ ಕೊಡದೆ ನೂಕಿದರು||
ಅಂದ ಮಾತ್ರಕೆ ಭವ ವಿರೋಧಿಗೆ |
ನಿಂದು ಮೈ ಮರೆ ತುಳಿಯುಬಹುದೆ? |
ಸಂದು ಪೋಯಿತು ಬೇನೆ ತಾನೇ ಸರಿದು ಸತ್ವರದಿ ||೫೧||

## ಶ್ರೀ ಕುರುಗಡ್ಡಿ ಕ್ಷೇತ್ರ.

ಇಂತು ಶ್ರೀ ಗುರು ದೇವಲೀಲೆಯು|
ನಾಂತು ಕಷ್ಟವ ಕಳೆದು ನಡೆಯುತ|
ನಿಂತನ್ನ ಕುರುಗಡ್ಡಿಯೆಂಬಾ ದಿವ್ಯ ಕ್ಷೇತ್ರದಲಿ ||

ಶಾಂತ ಮನದಾ ಯತಿವರೇಣ್ಯನು ।
ನಿಂತು ಚಾತುರ್ಮಾಸ ವ್ರತಗಳ ।
ಕಂತುಹರ ಪರಬೊಮ್ಮನೊಲಿವಂತೆಸಗುತೈತಂದ॥೫೨॥
ಮೊದಲು ಶ್ರೀ ಗುರುದತ್ತ ಮೂರುತಿ ।
ಯೊದಗಿದಂಥಾ ದಿವ್ಯ ತಾಣವ ।
ದಿಡುವೆಯಲ್ಲವೆ ಪರಮಪಾವನ ದತ್ತನವತಾರಿ ॥
ಸದಯ ಮೂರುತಿ ವಾಸುದೇವನು ।
ಮುದದಿ ಬಂದುದಕಾಗಿ ಸುರಪತಿ।
ಸದರವಾಗಿದೆ ಧನ್ಯವೆಲ್ತೇ! ಕ್ಷೇತ್ರ ಕುರುಗಡ್ಡಿ ॥೫೩॥
ಕೇಳು ಕೃಷ್ಣಾತೀರವೆನಿಸಿದ।
ಮೇಲು ಮೇಲಾದಮರ ಪುರದೊಳು।
ಶೀಲ ಸದ್ಗುಣ ಯತಿಯು ದಯದಿಂ ಮೆರೆದುದಾ ಕ್ಷೇತ್ರ ॥
ಹಾಲು ತುಪ್ಪದ ಮಳೆಯು ಭೋಜನ।
ಕಾಲದವನೀ ಸುರರ ವೇದದ ।
ಮೇಳದುತ್ಸವ ತಂದು ಕೊಟ್ಟನು ನಮ್ಮ ಗುರುನಾಥ ॥೫೪॥
ಇರಲು ಬೇಕಾಚರಣೆ ಶುದ್ಧವು।
ಪಿರಿದು ಧನಶುದ್ಧತೆಯು ಅದರಿಂ।
ದರಿದುಕೊಳ್ಳ್ವ ಮನದ ಶುದ್ಧತೆಯುರಡರಿಂ ಮಿಗಿಲು ॥
ಇರುವ ಕಾರಣ ವಾಸುದೇವನು ।
ಚರಿಸುತಿರ್ದನು ನಾಲ್ಕು ತಿಂಗಳು।
ಜರುಗಿಸಿರ್ದನು ಭಕುತ ಜನರೊಳು ಪೂತ ಭಿಕ್ಷೆಯನು॥೫೫॥

## ಭಕ್ತಪರಿಪಾಲನೆ.

ಬಂದ ವಾಮನರಾಯನೆಡೆಯೊಳು ।
ಹಿಂದು ಹುಣಸೇ ಮರದ ಬುಡದಲಿ ।
ಚಂದದಿಂದಲಿ ಗುರುವು ಮಾತಾಡುತ್ತ ಕುಳಿತಿರಲು ॥

ಅಂದು ನಡೆದಿಹ ಚೋದ್ಯ ಕೇಳೆಂ ।
ದೆಂದು ಬಾರದ ದೊಡ್ಡ ಗಾಳಿಯು।
ಬಂದು ಹುಣಿಸೆಯಹರಿಯುಕೆಡವಿತು ಮೂರ್ಛೆಬರುವಂತೆ॥೫೬
ಭಯವ ಪುಟ್ಟಿಸಿ ಭಯಗಳನ್ನುರೆ।
ಬಯಲು ಮಾಡುವ ಮಾಯಕಾರನು ।
ದಯದೆ ರಕ್ಷಿಸುತಿರುವ ಕಾಲಕೆ ಹಾನಿಯೊದಗುವದೇ? ॥
ನಿಯಮದಂತೇ ಮೂರ್ಛೆ ತಿಳಿಯಲು ।
"ಜಯವು ಸದ್ಗುರುನಾಥ ನಿನ್ನಯ ।
ದಯದೆ ಬದುಕಿದೆನೆಂ"ದು ಪೊಗಳ್ದನು ರಾಯವಾಮನನ॥
ತನ್ನ ದೇಹವು ಬೇನೆಯಿಂದಲಿ।
ಘನ್ನ ಜರ್ಜರವಾಗಿ ಸವೆದರು ।
ತನ್ನ ಮಕ್ಕಳು ಸುಖದಿ ಬಾಳಿರಲೆಂಬ ಮಾತೆಯೊಲು ॥
ತನ್ನ ಶಿಷ್ಯರ ಸಲಹುವಂಥಾ ।
ಘನ್ನ ಸದ್ಗುರು ವಾಸುದೇವನು ।
ಬನ್ನ ಬಡಿಪನೆ ಸುಖದಿ ವಾಮನರಾಯ ಬದುಕಿದನು ॥೫೮॥
'ನಂಬಿ ಕೆಟ್ಟರಿಲ್ಲ ಜಗದೊಳು ।
ನಂಬದೇ ಬಲು ಮಂದಿ ಕೆಟ್ಟರ ।
ದೆಂಬ ಸಾಣ್ಣುಡಿಯನುಭವಕ್ಕೆನಿತೆನಿತೊ ಬಂದಿಹುದು॥
ಸಾಂಬ ಮೂರುತಿ ಸರ್ವ ಜಗದೊಳ ।
ಗಿಂಬು ಬಿಡದಂತೆಲ್ಲ ಕಡೆಯಲಿ।
ತುಂಬಿ ನಿಂತಿರಲಾರು ಕೆಡುವರು ಸುಖದಿ ಬಾಳುವರು ॥೫೯॥
ನೀರು ಕೆಳಗಡೆ ಪರಿಯುವಾಗಲೆ।
ದಾರಿಯಲ್ಲಿರುವೆಡರ ನೀಗುತ ।
ಸೇರುತಿರ್ಪುದು ತಕ್ಕ ತಳವನೆ ಶ್ರಮವ ವಹಿಸುತ್ತ ॥

ಸಾರ ಬಲ್ಲಾ ಸದ್ಗುರೂತ್ತಮ |
ನೂರುಕೇರಿಗೆ ಪೋಗಿ ಭಕ್ತರ|
ತಾರತಮ್ಯವ ನೋಡಿ ರಕ್ಷಿಸಿ ಮೋಕ್ಷವೀಯುವನು||೬೦||
ದೇಶ ದೇಶವ ತಿರುಗೆ ಭಕ್ತರ|
ಆಶೆ ಪೂರಿಸಿ ಲೋಕ ರಕ್ಷಕ|
ನೀಶನಾ ಗುರು ದತ್ತರೂಪದ ವಾಸುದೇವಾಖ್ಯಾ||
ಏಸು ತಳಗಳ ತಿರುಗಿ ಬಂದನೊ|
ಆಸುತಳದೊಳಗುತ್ಸವಂಗಳು|
ಈಸುದಿನವೂ ನಡೆಯುತಿರುವವು ಪುಣ್ಯ ವಶದಿಂದ ||೬೧||

## ಕಾತರಖೇಡ.



ನಡೆದು ಶ್ರೀಗುರು ನರ್ಮದಾಂಬೆಯು |
ಧಡದೆ ಕಾತರಖೇಡಕ್ಕೈದುತ|
ಲೊಡನೆ ಕಂಡನದೊಬ್ಬ ಬ್ರಾಹ್ಮಣದಗ್ನಿಹೋತ್ರಿಯುನ ||
ಬಡವನಾಗಿಹ ವಿಪ್ರವರ್ಯಗೆ|
"ಬಿಡದೆ ಗಾಯತ್ರಿಯನು ಜಪಿಸಲು|
ಬೆಡಗಿನ್ನೈ ಸಿರಿ ನಿಜದಿ ಬಪ್ಪುದುದೆ"ಂದು ಪೇಳಿದನು||೬೨||
"ನೀಡು ಬುಧರಿಗೆ ದಾನ ಧರ್ಮವ|
ಬೇಡು ಹರಳೆಯುನವರ ಬಳಿಯೊಳು|
ದೂಡು ಜನ್ಮದ ಪರಿಭವಂಗಳ ನಡೆವ ಕಾಲಕ್ಕೆ ||
ಹೇಡಿಯುಂಡದೆ ಕಾಲ ಕಳೆಯದೆ|
ನಾಡಿಗೇ ಸುಖವೀವ ಕಾರ್ಯದೆ|
ಹೂಡು ಸತ್ವರ ನಿನಗೆ ಬೆಂಬಲಕಿಹನು ಗುರುನಾಥಾ"||೬೩||

# ಟಾಕಳೀಪುರ.

ಟಾಕಳೀಪುರದಲ್ಲಿ ವಾಸಿಸು |
ವೇಕಚಿತ್ತದ ದಾಜಿಪಂತನು|
ಕಾಕು ಜನರಿಂ ತಾಪಪೊಂದಿರೆ ಗುರುವು ತಾ ತಿಳಿದು||
ಸಾಕುವಾತನು ಕಷ್ಟನೀಗಿಸಿ|
ಲೋಕಕೊಪ್ಪುವ ಹಾಗೆ ಪೊರೆವನು|
ಯಾಕೆ ತಡವೈ ಜಿಂತುಗ್ರಾಮಕೆ ಪೊರಡುಯುತ್ಸವಕೆ ||೭೪||
ಎಂದು ಶ್ರೀ ಗುರು ಬೆನ್ನ ಹಿಂದೆಯೆ|
ಬಂದು ತನ್ನಯ ದಂಡದಿಂದಲೆ|
ಚಂದವಾಗಿಯೆ ಸನ್ನೆಗೆಯ್ಯಲು ಹಾಗೆ ಹೊರಹೊರಟು ||
ಮುಂದೆ ದೂರಿನ ಜಿಂತು ಗ್ರಾಮಕೆ |
ನಂದದಿಂದಲಿ ದಾಜಿಪಂತನು |
ಬಂದು ಸೇರಿದನೆರಡು ದಿವಸಕೆ ಗುರುವಿನಾಜ್ಞೆಯಲಿ ||೭೫||
ಇಂದೆ ಪೂರ್ಣಾಹುತಿಯು ನಡೆವುದ|
ದೆಂದು ಸರ್ವರು ನೆರೆದು ನಿಂತಿರೆ|
ಚಂದದಾ ಸಮಯಕ್ಕೆ ದಾಜೀಪಂತನೈತಂದ||
ಮುಂದೆ ನೋಡಲು ಸದ್ಗುರೂತ್ತಮ|
ಬಂದ ಭಕುತರು ಪೊಗಳುತಿರುತಿರೆ|
ನಂದ ಮೂರುತಿ ಕಂಡನೈ ಬಹು ದಿವ್ಯ ತೇಜದಲಿ ||೭೬||
ಹೋಗಿ ನೋಡಲು ತನ್ನ ಸಲಹಿದ|
ಯೋಗಿವರ್ಯನನೆದುರು ಕಂಡನು |
ಬಾಗಿ ಪೇಳ್ದನು ಭಕ್ತವೃಂದಕೆ ಚೋದ್ಯವಾಗಿಹುದ ||
ಆಗಿ ಪೋದಾ ಮನಸಿನನುಭವ|
ಬೇಗ ನುಡಿಯುತಲೀತನೆ ಜಗ |
ದಾಗುಹೋಗುಗಳಿಂಗೆ ಕಾರಣನೆಂದು ಪೊಗಳಿದನು ||೭೭||

"ಜೀಯ ಸದ್ಗುರು ದತ್ತರಾಜನೆ|
ಜೀಯ ಭಕ್ತಾನಂದ ಪೂರ್ಣನೆ|
ಜೀಯ ಶ್ರೀ ಜಗದಂತರಂಗದೆ ವ್ಯಾಪಿಸಿರ್ದವನೇ||
ಮಾಯೆಕೊಳಪಟ್ಟೆಮ್ಮ ಜನ್ಮದ|
ಕಾರ್ಯವೆಲ್ಲವು ವ್ಯರ್ಥವಾದವು|
ಹೇಯವಾದೀ ಬುದ್ಧಿನೀಗಿಸಿ ಕಾಯೊ ಗುರುರಾಯ" ||೭೮||
ಹೀಗೆಯುತ್ಸವ ಪೂರ್ಣವಾಗಲು|
ಬೇಗದಿಂದಾ ದಾಜಿಪಂತನು|
ಸಾಗಿ ಬಂದನು ತನ್ನ ಗ್ರಾಮಕೆ ತಾನು ಸಂಭ್ರಮದಿ||
ಯೋಗಿವರ್ಯನ ಭವವಿನಾಶನ |
ರಾಗದಿಂ ಮಿಗೆ ನಿತ್ಯ ನೆನೆಯುತ|
ನೀಗಿ ಭವವನು ಕಡೆಗೆ ಪೊಂದಿದ ಮೋಕ್ಷ ಸಂಪದವ ||೭೯||

## ಗರುಡನಾಥ ದರ್ಶನ (ಭಕ್ತವಾತ್ಸಲ್ಯ)

ನರ್ಮದಾತಟದಡವಿಯಲ್ಲಿಯೆ |
ಕರ್ಮನಾಶಕ ಗರುಡನಾಥನ|
ಧರ್ಮದಾಶ್ರಮ ನೋಡಿ ಗುರುವರ ಮುಂದೆ ನಡೆತರಲು ||
ತಮ್ಮ ಶಿಷ್ಯ ಸುಗಾಂಡದೇವನು|
ಹಿಮ್ಮನಸ್ಸಿನ ಪ್ರೇಮ ಭರದಿಂ|
ಬ್ರಹ್ಮ ಮೂರುತಿ ವಾಸುದೇವನ ಕಾಣಲೈತಂದ ||೮೦||
"ಬಂದೆಯೇನ್ನೈ ಶಿಷ್ಯರಾಜನೆ|
ತಂದುಕೊಂಡೆಯೊ ಅನುಭವಕ್ಕೆಯು|
ಇಂದು ಪೇಳ್ವೆ ನಿನಗೆ ಬಾಹ್ಯೋಪಾಧಿ ಸಮ್ಮತವೇ"||
ಎಂದು ಕೇಳಲು ಜೀಯ ಸಾಕೈ |
ಬಂಧನವು ಬೇಡಯ್ಯ ಭವಭಯ |
ತಂದೆ ನಿಮ್ಮುಪದೇಶವೊಂದೇ ಬೇಕು ಭಕ್ತನಿಗೆ ||೮೧||

“ನಾನು ನಿನ್ನಯ ಹೃದಯದಿರುವವ|
ನೀನು ನನ್ನಯ ಸೇವೆ ಗೆಯ್ಯುವ|
ತಾನೆ ದೂರದೊಳಿರುವ ಕಾರ್ಯವದೊದಗಿ ಬಂತೀಗ ||
ಜಾಣಶಿಷ್ಯೋತ್ತಮನೆ ನೀನೀ |
ತಾಣ ಬಿಟ್ಟೀ ತಿಲಕವಾಡಿಗೆ|
ಹೋಗಿ ಸೌಖ್ಯದಿ ವಾಸವಾಗಿರಬೇಕು ನನ್ನಿಚ್ಛೆ” ||೭೨||
ಎಂದ ಕೂಡಲೆ ಹೊರಟು ನಡೆದನು|
ಹಿಂದೆ ಯೋದಿದ ಸರ್ವ ಶಾಸ್ತ್ರದ |
ಚಂದದನುಭವ ಗುರುಗಳಾಜ್ಞೆಯ ಪಾಲಿಸುತ್ತಿಹುದು ||
ಮುಂದೆ ಶ್ರೀ ಗುರು ಹೊಟ್ಟೆನೋವಿಗೆ |
ನೊಂದು ಬರದಿರೆ ಶಿಷ್ಯ ಮರುಗುತ|
ಬೆಂದ ಮನದಿಂ ನೋಡಿ ಬಾರೆಂದೊಬ್ಬನಟ್ಟಿದನು ||೭೩||
ಅದಕೆ ಶ್ರೀ ಗುರು “ಬೆದರಬೇಡೈ|
ತುದಿಗೆ ಮರಣವು ಬಂದುದಾದರೆ|
ಯೊದಗತಕ್ಕಾ ನಿನ್ನ ಭಾಗದ ಫಲವ ತೆಗೆದಿಡುವೆ||
ಚದುರ ಶಿಷ್ಯನೆ ನೀನಿದಿಲ್ಲಿಗೆ|
ಹದಗಿ ಬರದಿರು” ಎಂದು ನಿಶ್ಚಿತ|
ಹೃದಯದೀಶ್ವರ ಪೇಳಿಬಿಟ್ಟನು ಪರಮಶಿಷ್ಯನಿಗೆ ||೭೪||

||೪ನೇ ಸಂಧಿ ಸಂಪೂರ್ಣಂ||

---

## ೫ನೇ ಸಂಧಿ.

### ನಿಜಾನಂದ.

ಸೂಚನೆ:—ಗುರುವಿನುತ್ಸವಗೆಯ್ಯುವಂಥಾ |
ಪರಿಯು ಸೂಚಿಸಿ ಶಿಷ್ಯವೃಂದವ|
ಪೊರೆವ ಸದ್ಗುರು ದತ್ತನಲ್ಲಡಗಿರ್ದು ರಂಜಿಸುವ ||೧||

ಮತ್ತೆ ನಡೆದಿಹ ಗುರುವಿನಾಟವ|
ಚಿತ್ತಗೊಟ್ಟುರೆ ಕೇಳಿ ಕೊಳ್ಳಿರಿ|
ಇತ್ತ ಶ್ರೀ ಗುರುಮೂರ್ತಿಗರುಡೇಶ್ವರದಿ ಇರುತಿರಲು||
ಅತ್ತ ದೂರ ಭಡೋಚದಲ್ಲಿಯು |
ಭಕ್ತದರುಶನಕಾಗಿ ಬರುತಿರೆ|
ವಿತ್ತಹಾರಕರಾದ ಕೆಲವರು ಪೇಳ್ದರಿಂತೆಂದು ||೧||
"ಈಗ ನಿಮಗಾ ತಳಕ ನದಿಯೊಳು|
ಸಾಗಲಾಗದು ನಾವಿನವಧಿಯು|
ನೀಗಿ ಹೋಯಿತು ನಿಮಗೆ ಹುಣ್ಣಿವೆ ಪೂಜೆ ದೊರಕದದು ||
ಬೇಗ ಪೋಗುವ ಮನವದಿದ್ದರೆ|
ಈಗೆ ಸುರುವಿರಿ ವಿಪುಲ ಧನವನು |
ಸಾಗುವಂದದೆ ಮಾಡಿ ನೋಳ್ಪೆವು ಯತ್ನ ನಿಮಗಾಗಿ" ||೨||
ಏನು ಮಾಡಲಿ ಬೇಡಿದಷ್ಟನು |
ನಾನು ಕೊಡಲಿಕ್ಕರ್ಹನಲ್ಲವು|
ತಾನೆ ಸದ್ಗುರುನಾಥನೆಲ್ಲರ ಬಯಕೆ ಪೂರಿಪನು ||
"ದೀನಬಂಧುವೆ ಜ್ಞಾನಸಿಂಧುವೆ|
ನಾನು ಈಗಿಲ್ಲಿದ್ದು ಮರಗುವೆ |
ನೀನೆ ಭಕ್ತರ ಕಾಮನಂಗಳನೆಲ್ಲ ನೀಡುವದು" ||೩||
ಹೀಗೆ ಪರಿಪರಿ ಭಜಿಪ ಭಕ್ತಗೆ|
ಯೋಗಿವರ್ಯನು ಬಂದು ಪ್ರೇಮದಿ|
"ಈಗ ಪೋಗೈ ನಿನ್ನ ಗ್ರಾಮಕೆ ಮತ್ತೆ ಬರಬಹುದು" ||
ಹೀಗೆ ನುಡಿದು ಪ್ರಸಾದ ನೀಡಲು |
ಸಾಗಿ ಬಂದನು ವ್ಯಸನದಿಂದಲಿ|
ಆಗೆ ಕಂಡನು ಮನೆಯೊಳಾಗುರು ಚಿತ್ರಪಟವನ್ನು ||೪||

ವಾಸುದೇವಾನಂದ ಯತಿವರ|
ನೀಸುಚಿತ್ರವದಿದರ ಹಾಗೆಯೆ|
ಆಸು ಪೌರ್ಣಿಮೆಗೆನ್ನ ನಯನಕೆ ಕಂಡ ತಾನಿದಕೆ||
ಲೇಶವಾದರು ಭೇದ ತೋರದು|
ಆಶೆಗೀಸಲ ಪೋಗಿ ನೋಡುವೆ
ವಾಸುದೇವನೆ ಕಾಯಲೆಂದೇ ಪೊರಟ ನಿಶ್ಚಯದಿ ||೫||
ಹಿಂದೆ ಮನದೊಳು ಮಾಳ್ಪ ಕಾರ್ಯ |
ಕ್ಕಂದಿಗಾದರು ವಿಘ್ನವುಂಟೇ? |
ಬಂಧಮುಕ್ತನ ದಿವ್ಯದರ್ಶನ ಲಾಭವಾಯ್ತವಗೆ ||
"ತಂದೆ ಜಯ ಜಯ ಸದ್ಗುರೂತ್ತಮ |
ಬಂದೆ ನೀನೇ ಗತಿಯು ರಕ್ಷಕ |
ನೆಂದು ನಂಬಿಹೆ ಗುರುವೆ ಸಲಹೈ ಸರ್ವರನವರತ" ||೬||

## ನಾಗಲೀಲೆಯು.



ಹಿಂದು ದಿನ ಶ್ರೀ ಯತಿವರೇಣ್ಯನು |
ಚಂದದಿಂದಲಿ ಧ್ಯಾನ ತೀರಿಸಿ |
ಬಂದ ಭಕುತರ ಸಂಶಯಂಗಳ ಕಳೆಯುತಿರುವಾಗ ||
ಹಿಂದು ನಾಗರಹಾವು ಪ್ರೇಮದೆ |
ಬಂದು ಗುರುಗಳ ಮೈಯ್ಯನಡರುತ|
ತಂದೆ ಶ್ರೀ ಗುರುವರನ ಮಸ್ತಕದಲ್ಲಿ ಹೆಡೆದೆಗೆದು ||೭||
ಆಡಿ ಬಳಿಕಾ ತೊಡೆಯ ಮೇಲದು|
ನೋಡು ನೋಡುತ್ತಿರಲು ಕುಳಿತಿತು|
ಆಡಲೇನ್ನೈ ಸರ್ಪರೆದೆ ಝಲ್ಲೆಂದು ಬೆಂಡಾಗಿ ||

ಓಡಿಪೋಗುವದನ್ನು ಕಾಣುತ |
"ಬೇಡ ಬೇಡೈ ನಾಗರಾಜನೆ|
ನಾಡು ನಿನ್ನದೆಯುಲ್ಲವೇನೈ ಬೈಲಿಗೇತಕ್ಕೆ?" ||೮||
"ಬಂದೆಯಪ್ಪಾ ದತ್ತರಾಜನ|
ಕಂದರೆನಿಬರು ನಿತ್ಯ ಬರುವರು|
ಬೆಂದು ಬೆದರುವರದಕೆ ನೀನಿನ್ನಿಲ್ಲಿ ಬರಬೇಡ" ||
ಎಂದು ಪೇಳಿದ ಗುರುವಿನಾಜ್ಞೆಯು |
ತಂದು ಮನದೊಳು ಹಾವು ಪೋಯಿತು |
ಚಂದನೋಡೈ ಮನುಜರಾದೆಮಗಷ್ಟು ಮತಿಯಿಲ್ಲ ||೯||

## ಭಕ್ತಪರಿಪಾಲನೆ

ಒಬ್ಬ ಫಾರಶಿ ಭಕ್ತ ತನ್ನನು|
ದಬ್ಬಿ ಬಂದಿಹ ಭೂತಬಾಧೆಗೆ|
ಉಬ್ಬುಸಂ ಬಡುತನ್ನದಕ್ಕದೆ ಶರಣು ಬಂದಿರಲು||
ಮಬ್ಬು ಹರಿಯಿತು ಗುರು ಕಟಾಕ್ಷದ |
ಲುಬ್ಬಿ ನಿತ್ಯದಲನ್ನರುಚಿಬರೆ |
ಹಬ್ಬ ಹುಣ್ಣಿವೆ ಕಂಡ ತೆರದಾ ಮನುಜ ಹಿಗ್ಗಿದನು ||೧೦||
"ನಿನ್ನ ಗ್ರಾಮಕೆ ತಿರುಗಿ ಪೋಗೈ|
ಎನ್ನ ದರುಶನವಾದ ಮೇಲಾ|
ನಿನ್ನ ಕಾರ್ಯವದಿಲ್ಲ ನಡೆಯೆ"ಂದೆನಲು ಗುರುವರನು||
"ಎನ್ನ ಸದ್ಗುರು ಕೇಳು ಹೃದಯದ |
ಬನ್ನವಿದ್ದಪುದೆನಗೆ ಭೂತವ|
ದಿನ್ನು ಕಾಡುತಲುಣ್ಣಗೊಡದೈ ಕಾಯೊ ಗುರುರಾಯ"||೧೧||

"ಕಾಯುವಾತನು ಜಗದಧೀಶನು|
ಮಾಯೆಯಿಂದಲಿ ಸಕಲ ಸಲಹುವ |
ಆಯಿತಿಲ್ಲಿಗ ಬಂದ ಕೆಲಸವು ಮರಳಿ ಪೋಗ''ನಲು||
"ಜೀಯ ಗುರುವರ ನಿನ್ನ ದರ್ಶನ |
ಬಾಯಿಗೂಟವ ಕೊಟ್ಟತೈ ನಿಜ|
ತಾಯಿಯಾದೈ ಎನಗ ನಿಶ್ಚಯ ಬಿಟ್ಟು ಪೋದಪನೇ" ||೧೨||
ಎಂದು ನಿಶ್ಚಿತ ಮನದೊಳಲ್ಲಿಯೆ|
ನಿಂದ ಕಾರಣ ಕೆಲವು ದಿವಸಕೆ|
ಸಂದುಪೋಯಿತು ಗೃಹದ ಬಾಧೆಯದುಣ್ಣತೊಡಗಿದನು||
ಮಂದಮತಿಯಾದೆಮಗೆ ಭವದೊಳು |
ಹಿಂದುಮುಂದಿನದೇನು ತಿಳಿಯದು|
ತಂದೆ ಶ್ರೀ ಗುರುನಾಥ ಸಲಹಿದರಾಗ ಬದುಕುವೆವು ||೧೩||

## ಪೂಜಾಪದ್ಧತಿ

ಹೀಗೆ ಇರುತಿರೆ "ದತ್ತಮೂರ್ತಿಗೆ |
ಆಗಮೋಕ್ತದಿ ಪೂಜೆ ನಡಿಸಲು|
ಬೇಗ ಗುಡಿ ಕಟ್ಟಿಸಿರಿ" ಎಂದೇ ಗುರುವು ಪೇಳಿದನು ||
"ಆಗಬಹುದೈ ಪಂಚ ಜನರೊಳು|
ನೀಗಲಾರದೆ ದೇವನಿಲಯವು?|
ಈಗ ನಿಮ್ಮಪ್ಪಣೆಗೆ ಬಾಹ್ಯರೆ?" ಎಂದು ನಮಿಸಿದರು ||೧೪||
"ಉದಯಕಾಲದ ಸ್ಮರಣಗೈಯುತ|
ವಿದಿತವಹ ಶ್ರೀ ಕಕ್ಕಡಾರತಿ |
ಮುದದಿ ಗೆಯ್ದರಿ ಬಳಿಕ ರಾಜೇಂದ್ರೋಪಚಾರವನು ||
ಪದುಮ ಬಾಂಧವ ಮಧ್ಯಗಗನಕೆ|
ಒದಗಿ ಬರಲಭಿಷೇಕಗೆಯ್ಯುತ|
ಸದಯನಿತ್ತುದನಾತಗರ್ಪಿಸಿ ಮುದದಿ ನಮಿಸುವದು" ||೧೫||

"ಮತ್ತೆ ಕೇಳ್ವುದು ಭಕ್ತವೃಂದವೆ |
ಹೊತ್ತು ಮುಳುಗಿದ ಮೇಲೆ ಶ್ರೀ ಗುರು|
ದತ್ತಮೂರ್ತಿಯ ಭಜಿಸುತಾರತಿ ಮಾಡಿ ವೀಕ್ಷಿಸನು ||
ಇತ್ತ ಬಳಿಕಾ ಶಯನದಾರತಿ |
ಯೆತ್ತ ಬೇಕೈ ಸುಖದಿ ನಿದ್ರೆಯು |
ಹತ್ತಲೆಂದೇ ಹಂಚಿಕೊಂಬುದು ಗುರುಪ್ರಸಾದವನು" ||೧೬||
"ಉದಯಕಾಲದೆ ಶಿವನ ದರ್ಶನ |
ಒದಗಿರಿರುಳಿನ ತಾಪ ಕಳೆವುದು |
ಮುದದೆ ಮಧ್ಯಾಹ್ನಕ್ಕೆ ದರುಶನ ಜನ್ಮದಘವನ್ನು ||
ವಿದಿತವಾಗಿಯೆ ಕಳೆಯುತಿರುವದು |
ತದಿಯ ಸಂಧ್ಯಾ ದರುಶನೆಲ್ಲರ |
ಒದಗಿದೇಳೂ ಜನ್ಮದಘವನೆ ಕಳೆವುದೈ ನಿಜದಿ" ||೧೭||
"ಇಂತು ಕ್ರಮದಿಂ ಸತತ ನಡೆಸಲು |
ಕಂತುಹರ ಪರಮಾತ್ಮನೊಲಿವನು |
ಶಾಂತ ಮನದಿಂದಿಷ್ಟ ಭಕುತರ ಸಲಹದಿದ್ದಪನೆ?" ||
ಚಿಂತೆ ಯಾತಕೆ ನಮ್ಮ ಮನಸಿನ |
ಸಂತೆಯಾಗಿದೆ ಭವದ ಜಳಲಿಕೆ|
ಮುಂತೆ ತಾನೇ ಪೊರೆವ ಶ್ರೀ ಗುರುನಾಥ ಪ್ರಖ್ಯಾತ" ||೧೮||
ಇಂತು ಶ್ರೀ ಪರಬೊಮ್ಮ ಭಕುತರ|
ಚಿಂತೆಗಳೆದೈ ಸಿರಿಯ ಸೊಗವನು|
ಮುಂತೆನಿಂದಲು ನೀಡಿ ಪೊರೆವವ ನೀಗ ಬಿಡುತಿಹನೇ ||
ಭ್ರಾಂತರಾಗಿಹ ಪ್ರಾಣಿ ರಕ್ಷಣ|
ಚಿಂತೆ ಶಂಕರಗಿರ್ಪುದಲ್ಲವೆ?|
ಶಾಂತಮೂರುತಿ ಪೊರೆವನೆಂದಿಗು ಬೇಡ ಸಂಶಯವು ||೧೯||

ಇರಲು ಈ ಪರಿ ಭಕ್ತವರ್ಗವ |
ಪೊರೆವ ಕೆಲಸದೆ ವಾಸುದೇವಗೆ |
ಜರೆಯು ಬಂದರವತ್ತು ವತ್ಸರವಾಯ್ತು ಧರೆಯೊಳಗೆ ||
ಕರುಣವಿರದತಿ ಸಾರಬಾಧೆಯು |
ಗುರುವಿನಂಗವ ಸೇರಿಕೊಳ್ಳಲು |
ಮರುಗಿಯೌಷಧಕೊಳ್ಳುವುದೆನ್ನುತ ಶಿಷ್ಯರುಸಿದರು ‡ ||೨೦||
"ಹಿಂದೆ ಸರ್ಪದ ಕಡತದಿಂದಲೆ |
ಬಂದ ಮಾರಿಕೆಯುಗ್ರ ಕಾಟದೆ|
ಮುಂದೆ ಜ್ವರದೊಳು ಸನ್ನಿಪಾತವು ಕೂಡಿಕೊಂಡಿರಲು ||
ಹಿಂದು ಕ್ಷಣ ಸಹ ಬೇನೆಗಳೆಯುದ |
ರಿಂದ ಔಷಧ ಕೊಳ್ಳಲಿಲ್ಲವು |
ತಂದೆ ಶ್ರೀ ಜಗದಾದಿಕಾರಣ ಪೊರೆವನಿಲ್ಲೇನು?" ||೨೧||
ಹೀಗೆ ನುಡಿಯುತ ದತ್ತನೆದುರಿಗೆ|
ಬಾಗಿ ಶಿರದಿಂ ಬೇಡಿಕೊಳ್ಳುತ|
"ಸಾಗಿಸೈ ನಿನ್ನಂಘ್ರಿಯುಗ್ಮದೆ ಬೆಸಸೊ ಪರಮಾತ್ಮಾ ||
ಆಗಲೀ ಜಡದೇಹದಿರುವಿಕೆ|
ಮಾಗಿ ಬಂದಿದೆ ಕಾಲನಿನ್ನೊಳು|
ತೂಗಿ ನೋಡೈ ಎಷ್ಟು ದಿನವಿರಬೇಕು ಭುವಿಯೊಳಗೆ?" ||೨೨||

---

‡ಪೂರ್ವದೇಹೆ ಕೃತಾಯೇಮೇ ವ್ಯಾಧಯಃ ಪ್ರವಿಶಸ್ತ್ವಮಾಮ್||
ಅರ್ದಯಸ್ತು ಚ ಮಾಂ ದುಃಖಾನ್ಯೃಣ ಮೆ ಪ್ರತಿಮುಂಚತಾಮ್||೧||
ಅನುಧ್ಯೇಯೋಽಸಿಮೇದೇವ ನಮೇಜನ್ಮಭವೇತ್ಪುನಃ ||
ಅಸ್ಮಾದ್ಬ್ರವೀಮಿ ಕರ್ಮಾಣಿ ಋಣಂ ಮೇನ ಭವೇದಿತಿ ||೨||
ಉಪತಿಷ್ಠಂತು ಮಾಂ ಸರ್ವೇ ವ್ಯಾಧಯಃ ಪೂರ್ವಸಂಚಿತಾಃ||
ಅನೃಣೋಗಸ್ತುಮಿಚ್ಛಾಮಿ ತದ್ವಿಷ್ಣೋಃ ಪರಮಂ ಪದಂ ||೩||

ವಾಸುದೇವಾನಂದ ವತ್ಸರ|
ಮಾಸಜ್ಯೇಷ್ಠದ ಕಡೆಯ ನಿಶೆಯೊಳು|
ದೋಷವರ್ಜಿತನೆದರು ನೋಡುತ ನಗೆಯ ಮುಖದಿಂದ||
ಈಶನಂಘ್ರಿಯಳೈಕ್ಯವಾದನು|
ದಾಸ ಜನರನು ಪೊರೆವ ಮಹಿಮನು|
ಭಾಸುರಾಂಗನು ಮೃತ್ಯುಲೋಕವ ತೊರೆದ ತಾನಕಟ||೨೩||
ಅಂದು ಮಾಷಾಷಾಢವೆಂಬುದು |
ಬಂದು ನಿಲುಕಿರಬಹುದು ಕಾರಣ|
ಏಂದಿಗಾದರು ಶುದ್ಧ ಪಾಡ್ಯದೊಳುತ್ಸವಂಗೆಯ್ದು ||
ಸಂದಭಕ್ತರು ಪುಣ್ಯ ಗಳಿಸುತ |
ಚಂದದಾಶೀರ್ವಾದ ಪಡೆವರು |
ತಂದೆ ಶ್ರೀ ಗುರು ದತ್ತರಾಯನ ರೂಪವೆನಿಸುವನ ||೨೪||
ಆಯಿತಿಲ್ಲಿಗೆ ಭಕ್ತಜನಂಗೆ|
ಕಾಯದಿಂದಲಿ ಭೆಟ್ಟಿಗೊಡುವುದು|
"ಮಾಯಪೂರಿತ ಭುವನದೊಳಗವ್ಯಕ್ತನಾಗಿದ್ದು ||
ಮಾಯನೀಗಿಸಿ ಸರ್ವಕಾಲದಿ |
ಕಾಯುತಿರುವದು ಲೇಸದೆಂದೇ"|
ಜೀಯನಡಗಿದನೀಶಪಾದದೆ ತನ್ನ ತಾನರಿತು ||೨೫||
ಗುರುವು ದತ್ತನ ಪಾದದಡಗಲು|
ಪರಮ ದುಃಖದೆ ಶಿಷ್ಯವೃಂದವು |
ಮರುಗಿ ಬಾಯ್ಬಡಕೊಂಡು ಗೋಳಿಡುತಿದ್ದುದಷ್ಟರಲಿ ||
ಹರಡಿ ಹೋಯಿತು ದೇಶದೇಶಕೆ|
ದುರುಳವಾರ್ತೆಯು ತಡವ ಮಾಳ್ಪುದೆ|
ಪರಮಗುರು ತಾ ನಡಗೆ ದುಃಖವದಾಯ್ತು ಸಕಲರಿಗೆ||೨೬||

"ಹೀಗೆ ಮರುಗುತ ಕುಳಿತರೇನ್ಸೈ? |
ಆಗಿ ಹೋಗಿಹ ಕಾರ್ಯಬಾರದು|
ಸಾಗಿಸಿರ್ಪನು ಕಾಲರಾಯನು ಜನನ-ಮರಣವನು ||
ರಾಗದಿಂದದನೆಲ್ಲ ಪ್ರೇಮದಿ|
ಭೋಗಿಸುತ್ತಾದರಿಸಬೇಕೈ |
ಈಗ ಮಾಡಿರಿ ಗುರುವಿನಂಗಕೆ ಜಲಸಮಾಧಿಯನು" ||
ಎಂದು ಸರ್ವರು ಭಕ್ತಿಪೂರ್ವಕ |
ತಂದು ಕಣ್ಣೀರುದರಿಸುತ್ತಲೆ |
ತಂದೆ ಶ್ರೀ ಗುರುವಾಸುದೇವನ ದೇಹವನ್ನೊಯ್ದು ||
ಅಂದು ನರ್ಮದೆಯೊಳಗೆ ಬಹು ವಿಧ|
ದಿಂದ ಕಾಯೌ ನೀನೆ ತಾಯಿಯೆ|
ಎಂದು ದುಗುಡದಿ ಭಕ್ತರಿಟ್ಟರು ಗುಪ್ತಧನದಂತೆ ||೨೮||
"ನೀನು ಗೆಯ್ದಿರುವಂಥ ಕಾರ್ಯವ |
ನೇನು ಪೇಳಲು ಬರಲುಬಹುದೇ?|
ಜ್ಞಾನರಾಶಿಯೆ, ಭಕ್ತವರ್ಗದ ಭಕ್ತಿಗೊಲಿಯುವನೇ||
ಹೀನ ಮಾನವರೇನು ಬಲ್ಲವು |
ನೀನೆ ಕರುಣದೆ ಮಾರ್ಗದೋರಲು |
ಜ್ಞಾನಭಾಸ್ಕರ ತಾನೆಯುದಿಪನು ಹೃದಯದಾಗಸದಿ" ||೨೯||
ಜಯವು ಜಯವೈ ವಾಸುದೇವಗೆ |
ಜಯವು ಜಯವೈ ದತ್ತರೂಪಗೆ|
ಜಯವು ಜಯವೈ ಸರ್ವರಂತರದಲ್ಲಿ ವಾಸಿಪಗೆ ||
ಜಯವು ಜಯವೈ ಯೋಗಿವರ್ಯಗೆ |
ಜಯವು ಜಯವೈ ಪರಮಹಂಸಗೆ |
ಜಯವು ಜಯವೈ ಭಕ್ತವತ್ಸಲ ವಿಶ್ವನಾಯಕಗೆ ||೩೦||

ಗುರುವೆ ಜಯ ಜಯ ಲೋಕರಕ್ಷಕ |
ಗುರುವೆ ಜಯ ಜಯ ದುಷ್ಟಮರ್ದನ |
ಗುರುವೆ ಜಯ ಜಯ ಸಾಧುಪಾಲನ ದೀನಮಂದಾರ||
ಗುರುವೆ ಜಯ ಜಯ ವಾಸುದೇವನೆ|
ಗುರುವೆ ಜಯ ಜಯ ಯತಿವರೇಣ್ಯನೆ|
ಗುರುವೆ ನಿನ್ನಯ ಸ್ಮರಣೆಯಿರಲೈ ಸರ್ವರಂತರದಿ ||೩೧||
ಮಂಗಳಾಂಗನೆ ನಿನ್ನ ಪಾದಕೆ|
ಮಂಗಳಾರತಿಯೆತ್ತಿ ಬೆಳಗುವೆ|
ಸಂಗವಿರಲೈ ಸಾಧು ಜನರೊಳು ದೀನಬಾಂಧವನೇ ||
ಇಂಗಿತಾರ್ಥವ ಮತ್ತೆ ಪೇಳ್ವುದೆ? |
ಭಂಗ ಬಾರದ ತೆರದಿ ರಕ್ಷಿಸಿ|
ರಂಗಸುಖ ಶ್ರೀಪಾದರಾಯನ ಸ್ಮರಣೆಯನ್ನೀಯೈ ||೩೨||
ಇಂತು ಶಿಷ್ಯ ಸುಗಾಂಡಸಾಧು ವಿ |
ವಿನಂತರಂಗದಲೀಶ ನುಡಿಸಿದ|
ಸಂತಚರಿತವು ವಾಸುದೇವಾನಂದಗರ್ಭಿತವು ||
ಚಿಂತೆಗಳೆಯಲಿ ಭಕ್ತಜನರಿಗೆ|
ಶಾಂತಮನದಲಿ ಫಲವ ಕೊಡುತಲಿ|
ಕಂತುಹರ ಶ್ರೀದತ್ತಗರ್ಭಿತವಾಗಿ ಶೋಭಿಸಲಿ ||೩೩||
ಮಾಲತೀಶಾರ್ಚಕನ ಮುಖದಿಂ|
ಹೇಳಿ ಬರೆಸಿದ ತನ್ನ ಚರಿತವು|
ಕಾಲಕಾಲಕೆ ಪಠಿಸಿ ಕೇಳುವ ತೆರದೆ ಭಕ್ತಿಯನು ||
ಬಾಲವೃದ್ಧ ಸಮೂಹದಲ್ಲಿಡು|
ತಾಲಸಂಗಳೆದೀಯಲೈ ಪ್ರಭು|
ಮೇಲು ಮೇಲಾದೆಲ್ಲ ಸೌಖ್ಯವ ದಯದಿ ಪಾಲಿಸಲಿ ||೩೪||

೫ನೇ ಸಂಧಿ ಸಂಪೂರ್ಣಂ||

---

## ಶ್ರೀ ದತ್ತಗುರು ಪ್ರಾರ್ಥನಾ.

### ಪದ—೧ (ಧಾಟಿ—ಉದ್ಧವಾ ಶಾಂತವನಕರ ಜಾ)

ಶಾಂತ ಹೋ ಶ್ರೀ ಗುರುದತ್ತಾ ಮಮ ಚಿತ್ತಾ ಶಮವೀ ಆತಾ
||ಪಲ್ಲ|| ತೂ ಕೇವಳ ಮಾತಾ ಜನಿತಾ ಸರ್ವಥಾ ತೂ ಹಿತಕರ್ತಾ||
ತೂ ಆಪ್ತ ಸ್ವಜನ ಭ್ರಾತಾ ಸರ್ವಥಾ ತೂಚಿ ತ್ರಾತಾ ||ಚಾಲ||
ಭಯಕರ್ತಾ ತೂ ಭಯಹರ್ತಾ | ದಂಡ ಧರ್ತಾ ತೂ ಪರಿಪಾತಾ|
ತುಜವಾಚುನಿ ನ ದುಜೀ ವಾರ್ತಾ| ತೂ ಆರ್ತಾ ಆಶ್ರಯದತ್ತಾ ||
||ಶಾಂತ ||೧||

ಅಪರಾಧಾಸ್ತವ ಗುರುನಾಥಾ ಜರಿದಂಡಾ ಧರಿಸಿ ಯಥಾರ್ಥಾ||
ತರಿ ಆಹ್ಮಿ ಗಾಉನಿ ಗಾಥಾ ತವಚರಣೀ ನಮವೂ ಮಾಥಾ || ಚಾಲ ||
ತೂ ತಥಾಪಿ ದಂಡಿಸಿ ದೇವಾ | ಕೋಣಾಚಾ ಮಗ ಕರೂ ಧಾವಾ|
ಸೋಡವಿತಾ ದುಸರಾ ತೇವ್ಹಾ ಕೋಣ ದತ್ತಾ ಆಮ್ಹಾ ತ್ರಾತಾ||೨||

ತೂ ನಟಸಾ ಹೋಉನಿ ಕೋಪೀ ದಂಡಿತಾ ಹೀ ಆಹ್ಮೀ ಪಾಪೀ||
ಪುನರಪಿ ಹೀ ಚುಕತ ತಥಾಪೀ ಆಮ್ಹಾ ವರಿ ನಚ ಸಂತಾಪೀ ||ಚಾಲ||
ಗಚ್ಛತಃ ಸ್ಖಲನಂ ಕ್ವಾಪಿ| ಅಸೆ ಮಾನುನಿ ನಚ ಹೋ ಕೋಪೀ| ನಿಜ
ಕೃಪಾಲೇಶಾ ಓಪೀ || ಆಮ್ಹಾವರಿ ತೂ ಭಗವಂತಾ ||೩||

ತವಪದರೀ ಅಸತಾ ತಾತಾ ಆಡಮಾರ್ಗೀ ಪಾವುಲ ಪಡತಾ ||
ಸಾಂಭಾಳುನಿ ಮಾರ್ಗೀ ನೇತಾ ಆಣಿತಾ ನ ದುಜಾ ತ್ರಾತಾ||ಚಾಲ||
ನಿಜಬ್ರೀದಾ ಆಣುನಿ ಚಿತ್ತಾ| ತೂ ಪತಿತಪಾವನ ದತ್ತಾ| ಪಳೇ ಆತಾ
ಆಮ್ಹಾ ವರತಾ|| ಕರುಣಾಘನ ತೂ ಗುರುನಾಥಾ ||೪||

ಸಹಕುಟುಂಬ ಸಹಪರಿವಾರ ದಾಸ ಆಹ್ಮೀ ಹೇ ಘರದಾರ ||
ತವ ಪದೀ ಅರ್ಪು ಅಸಾರ ಸಂಸಾರಾಹಿತ ಹಾ ಭಾರ || ಚಾಲ ||
ಪರಿಹರಿಸಿ ಕರುಣಾ ಸಿಂಧೋ ತೂ ದೀನನಾಥ ಸುಬಂಧೋ| ಆಮ್ಹಾ
ಅಘಲೇಶ ನ ಬಾಧೋ || ವಾಸುದೇವಪ್ರಾರ್ಥಿತ ದತ್ತಾ|| ೫ ||

### ಪದ ೨.

ಶ್ರೀ ಗುರುದತ್ತಾ ಜಯ ಭಗವಂತಾ ತೇ ಮನನಿಷ್ಠುರ ನ ಕರೀ ಅತಾ ||ಶ್ರೀ ಗುರು ||ಪಲ್ಲ|| ಚೋರೆ ದ್ವಿಜಾಸೀ ಮಾರಿತಾಮನಜೇ|| ಕಳಕಳಲೆ ತೇ ಕಳಕಳೋ ಅತಾ ||೧|| ಪೋಟ ಶೂಳಾನೇ ದ್ವಿಜ ತಡಫಡತಾ ಕಳಕಳಲೇ ತೇ ಕಳಕಳೋ ಅತಾ || ೨ || ದ್ವಿಜಸುತ ಮರತಾ ವಳಲೇ ತೇ ಮನ || ಹೋಕೀ ಉದಾಸೀನ ನವಳೇ ಅತಾ || ೩ || ಸತಿಪತಿ ಮರತಾ ಕಾಕುಳತಿ ಯೇತಾ || ವಳಲೇ ತೇ ಮನ ನವಳೇಕಿ ಅತಾ||೪|| ಶ್ರೀಗುರುದತ್ತಾತ್ರ್ಯಜೀನಿಷ್ಠುರತಾ || ಕೋಮಲ ಚಿತ್ತಾ ನಳವೀ ಅತಾ||೫||

### ಪದ ೩

ಜಯ ಕರುಣಾಘನ ನಿಜ ಜನಜೀವನ||ಅನಸೂಯಾನಂದನ ಪಾಹಿ ಜನಾರ್ದನ||ಪಲ್ಲ|| ನಿಜ ಅಪರಾಧೇ ಉಪರಾಟ ದೃಷ್ಟಿ|| ಹೋವುನಿ ಪೋಟ ಭಯಂಧರೂಪಾವನ || ಜಯ||೧|| ತೂ ಕರುಣಾಕರಕಧಿ ಅಹ್ಮಾವರ | ರುಸಸಿ ನ ಕಿಂಕರ ವರದ ಕೃಪಾಘನ|| ಜಯ || ೨ || ವಾರೀ ಅಪರಾಧಾ ತೂ ಮಾಯ ಬಾಪ| ತವ ಮನಿ ಕೋಪಲೇಶ ನ ವಾಮನ||೩|| ಬಾಲಕಾಪರಾಧಾ ಗಣಿ ಜರಿ ಮಾತಾ|| ತರೀ ಕೋಣ ತ್ರಾತಾ ದೇಇಲ ಜೀವನ||೪|| ಪ್ರಾರ್ಥಿ ವಾಸುದೇವ ಪದಿ ಠೇವಿಭಾವ|| ಪದಿದೇವೋ ಠಾವದೇವ ಅತ್ರಿನಂದನ ||೫||

ಕರುಣಾತ್ರಿಪದಿ ಸಮಾಪ್ತ.

ಆರತಿ—(ಶ್ರೀ ವಾಸುದೇವಾನಂದ ಸರಸ್ವತಿ ಸ್ವಾಮಿಗಳದು)

ಜಯ ಜಯ ಶ್ರೀಮದ್ಗುರುವರ ಸ್ವಾಮಿನ್ ಪರಮಾತ್ಮನ್‌ಹಂಸಾ||
ವಾಸುದೇವಾನಂದ ಸರಸ್ವತಿ ಆರತಿ ತದಹಂ ಸಃ || ಪಲ್ಲ ||
ಸೋಽಹಂ ಹಂಸಃ ಪಕ್ಷಾಭ್ಯಾಂ ಸಂಚರಸಿಹ್ಯಾಕಾಶೇ |
ವಾಸಸ್ತೈಖಲು ಲೋಕೇ ಸತ್ಯೆ ಕ್ರೀಡಾತವ ಮಾನಸೇ || ಜಯ ||೧||
ಮುಕ್ತಾಹಾರೋ ಬ್ರಹ್ಮ ವಾಹಕೋ ವೈರಾಡ್ರೂಪಧರ |
ಭಕ್ತರಾಜ ಹೃದ್ಧ್ವಾಂತ ತಮೋಽಹೃತ್ ಸ್ವೀಕುರುಮಾಂಚ ಹರ ||೨||
ಪಕ್ಷಸ್ಯೈಕೇ ವಾತೇ ನೈತೇ ಭೀತಾಃ ಕಾಕಾದ್ಯಾಃ ||
ಪಲಾಯಿತಾಸ್ತೆ ದ್ರುತಂ ಪ್ರಭಾವಾದ್ಭವಂತಿ ಚಾ ದೃಶ್ಯಾಃ ||೩||
ಏವಂ ಸತಿ ಖಲು ಬಾಲಸ್ತೇಽಹಂ ಗ್ರಸಿತಃ ಕಾಮಾದ್ಯೈಃ||
ಮಾತಸ್ತ್ವರಯಾ ಚೋದ್ಧರ ಕೃಪಯಾ ಪ್ರೇಷಿತ ಶಾಂತಾದ್ಯೈಃ||೪||
ದಾಸಸ್ತೇ ನರಸಿಂಹ ಸರಸ್ವತೀ ಯಾಚೆ ಶ್ರೀ ಚರಣಂ ||
ಭಕ್ತಿ ಶ್ರದ್ಧೆ ವಾಸಸ್ತೇಽಹೃದಿ ಸತತಂ ಮೇ ಶರಣಮ್ ||೫||

|| ವಾಸುದೇವಾರ್ಪಣಮಸ್ತು ||

ಸಂಪೂರ್ಣ

